# ಪಂಚಾಯತ್ ರಾಜ್ ಮತ್ತು ಮಹಿಳೆ - ಒಂದು ಅಧ್ಯಯನ

## (ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಗ್ರಾಮ ಪಂಚಾಯತಿಗಳನ್ನು ಅನುಲಕ್ಷಿಸಿ)

ರಾಜ್ಯಶಾಸ್ತ್ರದಲ್ಲಿ ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಯ
ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರೌಢ ಪ್ರಬಂಧ


ಸಂಶೋಧಕರು
**ಯರಿಸ್ವಾಮಿ ಎಂ.**

ಮಾರ್ಗದರ್ಶಕರು
**ಡಾ. ಶೌಕತ್ ಅಝೀಮ್**



ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ, ಕಮಲಾಪುರ - ೫೮೩ ೨೭೬

ಸೆಪ್ಟೆಂಬರ್-೧೯೯೭

# ಪಂಚಾಯತ್ ರಾಜ್ ಮತ್ತು ಮಹಿಳೆ - ಒಂದು ಅಧ್ಯಯನ

## (ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಗ್ರಾಮ ಪಂಚಾಯತಿಗಳನ್ನು ಅನುಲಕ್ಷಿಸಿ)

ರಾಜ್ಯಶಾಸ್ತ್ರದಲ್ಲಿ ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಯ
ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರೌಢ ಪ್ರಬಂಧ


ಸಂಶೋಧಕರು
**ಯರಿಸ್ವಾಮಿ ಎಂ.**





ಮಾರ್ಗದರ್ಶಕರು
**ಡಾ. ಶೌಕತ್ ಅಝೀಮ್**



ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ, ಕಮಲಾಪುರ - ೫೮೩ ೨೨೧

ಸೆಪ್ಟೆಂಬರ್-೧೯೯೭






## ಸಂಶೋಧಕರ ಪ್ರಮಾಣ ಪತ್ರ

**"ಪಂಚಾಯತ್ ರಾಜ್ ಮತ್ತು ಮಹಿಳೆ - ಒಂದು ಅಧ್ಯಯನ" (ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಗ್ರಾಮ ಪಂಚಾಯಿತಿಗಳನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ರಾಜ್ಯಶಾಸ್ತ್ರದಲ್ಲಿ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ **ಡಾ. ಶೌಕತ್ ಅಝೀಮ್** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಪ್ರಬಂಧ ಅಥವಾ ಇದರ ಯಾವುದೇ ಭಾಗವನ್ನು ಯಾವ ಪದವಿಗಾಗಲಿ ಅಥವಾ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲ ಎಂದು ಈ ಮೂಲಕ ಘೋಷಿಸುತ್ತೇನೆ.

M. Yeriswamy

ದಿನಾಂಕಃ ೨೦.೦೯.೧೯೯೭
ಸ್ಥಳಃ ವಿದ್ಯಾರಣ್ಯ

ಯರಿಸ್ವಾಮಿ. ಎಂ.
ಎಂ.ಫಿಲ್. ವಿದ್ಯಾರ್ಥಿ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಯರಿಸ್ವಾಮಿ ಎಂ. ಅವರು **"ಪಂಚಾಯತ್ ರಾಜ್ ಮತ್ತು ಮಹಿಳೆ-ಒಂದು ಅಧ್ಯಯನ" (ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಗ್ರಾಮ ಪಂಚಾಯಿತಿಗಳನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ೧೯೯೭-೯೭ನೇ ಸಾಲಿನ ರಾಜ್ಯಶಾಸ್ತ್ರದ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಪ್ರೌಢ ಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲೀ, ಉದ್ದೇಶಗಳಿಗಾಗಲೀ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: ೨೦.೦೯.೧೯೯೭
ಸ್ಥಳ: ವಿದ್ಯಾರಣ್ಯ

ಮಾರ್ಗದರ್ಶಕರು
ಡಾ. ಶೌಕತ್ ಅಝೀಮ್
ಅಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಟ್ಟ ಮಾನ್ಯ ಕುಲಪತಿಗಳಾದ ಡಾ. ಚಂದ್ರಶೇಖರ ಕಂಬಾರ ಮತ್ತು ಆಡಳಿತ ವರ್ಗದ ಇತರ ಎಲ್ಲಾ ಹಿರಿಯರಿಗೆ,

ಅಧ್ಯಯನದ ಕ್ರಮವನ್ನು ಬೋಧಿಸಿ ಪ್ರೀತಿಯಿಂದ ಮಾರ್ಗದರ್ಶನ ನೀಡಿದ ಅಧ್ಯಾಪಕರಾದ ಡಾ. ಶೌಕತ್ ಅಝೀಮ್ ಇವರಿಗೆ,

ಅಧ್ಯಯನದ ಅವಧಿಯಲ್ಲಿ ವಿವಿಧ ರೀತಿಯಲ್ಲಿ ಬೋಧಿಸಿದ ಅಭಿವೃದ್ಧಿ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ.ಬಿ. ಶೇಷಾದ್ರಿ, ಪ್ರವಾಚಕರಾದ ಶ್ರೀ ಟಿ.ಆರ್.ಚಂದ್ರಶೇಖರ್, ಬಿ.ಆರ್.ಲಿಂಗರಾಜ್ (ಕೆ.ಎ.ಎಸ್) ಮತ್ತು ವಿಭಾಗದ ಇತರ ಭೋದಕ ವರ್ಗದವರಿಗೆ,

ಅಧ್ಯಯನ ಅವಧಿಯಲ್ಲಿ ಬೋಧಿಸಿದ ಅಧ್ಯಯನಾಂಗದ ನಿರ್ದೇಶಕರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರಿಗೆ, ಮತ್ತು ಡಾ. ಮಂಜುನಾಥ ಬೇವಿನಕಟ್ಟಿ, ಪ್ರೊ.ಟಿ.ಎಸ್. ಸತ್ಯನಾಥ, ಡಾ. ಶಿವರಾಂ ಪಡಿಕ್ಕಲ್, ಡಾ. ಮೈತ್ರಿ ಕಾಮಣ್ಣ ಇವರುಗಳಿಗೆ,

ಅಧ್ಯಯನ ಅವಧಿಯಲ್ಲಿ ಸಹಕರಿಸಿದ, ಇತರ ಎಲ್ಲಾ ಬೋಧಕ ವರ್ಗದವರಿಗೂ ವಿವಿಧ ರೀತಿಯಲ್ಲಿ ಸಹಕರಿಸಿದ ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯ ಸಿಬ್ಬಂದಿಗೂ, ಉಪನ್ಯಾಸಕರಾದ ಶ್ರೀ ಚಂದ್ರಶೇಖರ್, ಸಹೋದರನಾದ ಕೆ. ಶ್ರೀನಿವಾಸ, ಮತ್ತು ಎಲ್ಲಾ ರೀತಿಯಿಂದಲೂ ನಮ್ಮ ಅಧ್ಯಯನಕ್ಕೆ ಅಂಕಿ ಅಂಶಗಳನ್ನು ಒದಗಿಸಿಕೊಟ್ಟ ಹಗರಿಬೊಮ್ಮನಹಳ್ಳಿ ತಾಲ್ಲೂಕು ಪಂಚಾಯಿತಿಯ ಸಿಬ್ಬಂದಿ ವರ್ಗಕ್ಕೆ,

ಕ್ಷೇತ್ರ ಕಾರ್ಯದ ಅವಧಿಯಲ್ಲಿ ಸಹಕರಿಸಿದ, ಮಾವನವರಾದ ಜೆ. ಪ್ರಹ್ಲಾದ್ ಮುಖ್ಯೋಪಾಧ್ಯಾಯರು, ಸಹಪಾಠಿ ಮಿತ್ರರಾದ, ಜೆ. ಕೃಷ್ಣ, ಹೆಚ್. ಗುರುಬಸವ ರಾಜ್, ಸಿ. ಅಶೋಕ, ಎಂ.ಕೆ. ದುರುಗಪ್ಪ, ಎಸ್. ಚಂದ್ರಪ್ಪ, ಯು.ನಾಗರಾಜ, ಎಂ.ಪಿ. ಶಿವಮೂರ್ತಿ, ಎಂ. ಶಿವಮೂರ್ತಿ, ಎಂ.ಅಶೋಕ, ಹೆಚ್. ಕೊಟ್ರೇಶ್, ಜಿ. ಮಂಜುನಾಥ, ಕೆ.ಮಂಜುನಾಥ, ಶಶಿಧರ, ಪಿ. ವೆಂಕಟೇಶ, ಮರಬ್ಬಿಹಾಳ್ ಮಿತ್ರರಿಗೂ ಮತ್ತು ಇತರ ಎಲ್ಲಾ ಮಿತ್ರರಿಗೆ,

ಅಧ್ಯಯನ ಅವಧಿಯಲ್ಲಿ ನೆರವಾದ ಇತರ ಎಲ್ಲಾ ಸಂಶೋಧನಾ ಸಹಪಾಠಿಗಳಿಗೆ,

ಸದಾ ನನ್ನ ಶ್ರೇಯಸ್ಸನ್ನು ಬಯಸುವ ಶ್ರೀಯುತ ಅಜ್ಜನವರಾದ ಜೆ.ತಿಮ್ಮಣ್ಣ, ಅಮ್ಮನವರಾದ ಶ್ರೀಮತಿ ರುಕ್ಮಿಣಿ ತಿಮ್ಮಣ್ಣ, ದೊಡ್ಡಪ್ಪನವರಿಗೆ, ತಂದೆ-ತಾಯಿಗೆ, ಸಹೋದರರಿಗೆ ಮತ್ತು ಎಲ್ಲಾ ಅಕ್ಕ ಮಾವಂದರಿಗೆ ಮತ್ತು ಬಂಧುಗಳಿಗೆ,

ಈ ಪ್ರೌಢ ಪ್ರಬಂಧವನ್ನು ಗಣಕ ಯಂತ್ರದಲ್ಲಿ ಸುಂದರವಾಗಿ ಸಂಯೋಜಿಸಿಕೊಟ್ಟ ಹರ್ಷ ಕಂಪ್ಯೂಟರ್ಸ್‌ನ ಟಿ.ಎಲ್.ಯೋಗಾನಂದ ಇವರುಗಳಿಗೆ,

ತುಂಬು ಹೃದಯದ ಕೃತಜ್ಞತೆಗಳು,

ಯರಿಸ್ವಾಮಿ. ಎಂ.

# ಪರಿವಿಡಿ

# ಅಧ್ಯಾಯ ೧

## ಪ್ರಸ್ತಾವನೆ

ಜಗತ್ತಿನಲ್ಲಿಯೇ ಬೃಹತ್ ಪ್ರಜಾಪ್ರಭುತ್ವ ಎಂದು ಕರೆಯಲ್ಪಡುವ ಭಾರತ ಮೂಲತಃ ಹಳ್ಳಿಗಳಿಂದ ಕೂಡಿರುವ ಒಂದು ಶ್ರೇಣೀಕೃತ ರಾಷ್ಟ್ರವಾಗಿದೆ. ಹಳ್ಳಿಗಳ ಪ್ರಗತಿಯಾಗದ ಹೊರತು ರಾಷ್ಟ್ರದ ಪ್ರಗತಿ ಅಸಾಧ್ಯ. ಗ್ರಾಮೀಣ ಜನತೆಯ ಅಗತ್ಯಗಳನ್ನೆಲ್ಲ ಪೂರೈಸುವುದರ ಜೊತೆಗೆ ಅಲ್ಲಿನ ಅನಿಷ್ಟಗಳನ್ನು ನಿವಾರಿಸಿ ಗ್ರಾಮೀಣ ಪ್ರಜೆಯು ಭಾರತದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಕಾರ್ಯ ಕಲಾಪಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡುವ ಸದುದ್ದೇಶದಿಂದ ಗ್ರಾಮೀಣ ಪ್ರದೇಶದ ಆಡಳಿತ ಸಂಸ್ಥೆಗಳನ್ನು ರೂಪಿಸಿದ್ದು, ಹಿಂದಿನ ಗ್ರಾಮೀಣ ಪ್ರದೇಶಗಳ ಸ್ವಯಂ ಆಡಳಿತ ಸಂಸ್ಥೆಗಳ ಸ್ವರೂಪವನ್ನು ಬದಲಾಯಿಸಿ ನೂತನವಾಗಿ ರೂಪಿಸಿದ ಸಂಸ್ಥೆಗಳನ್ನು ೧೯೫೯ ರಿಂದ 'ಪಂಚಾಯತ್ ರಾಜ್' ಎಂದು ಕರೆದು ಆಚರಣೆಯಲ್ಲಿ ತರಲಾಗಿದೆ.

ಆಧುನಿಕ ಸರ್ಕಾರ ಪದ್ಧತಿಗಳಲ್ಲಿ ಸ್ಥಳೀಯ ಸರ್ಕಾರಗಳು ಪ್ರಮುಖ ಸ್ಥಾನವನ್ನು ಪಡೆದಿವೆ. ಪಂಚಾಯತ್ ರಾಜ್ ಆಡಳಿತವು ಭಾರತದ ಇತಿಹಾಸದ ಉದ್ದಕ್ಕೂ ತನ್ನದೇ ಆದ ವಿಶಿಷ್ಟ ಪರಂಪರೆಯನ್ನು ಉಳಿಸಿಕೊಂಡು ಬಂದಿದೆ. ಮಹಾತ್ಮ ಗಾಂಧೀಜಿಯವರು ನಮ್ಮ ದೇಶದ ಸ್ವಾತಂತ್ರ್ಯ ಪೂರ್ವದಲ್ಲಿ ಗ್ರಾಮ ಸ್ವರಾಜ್ಯದ ಬಗ್ಗೆ ಬಹಳ ದೊಡ್ಡ ಆಶಯವನ್ನು ಇಟ್ಟುಕೊಂಡು ಹಳ್ಳಿಯ ಜನರು ಸಂಪೂರ್ಣವಾಗಿ ದೇಶದ ಯೋಜನೆಗಳನ್ನು ರೂಪಿಸಿಕೊಳ್ಳಬೇಕೆಂದು ಬಯಸಿದ್ದರು. 'ರಾಷ್ಟ್ರ ಸರಪಳಿಯ ಒಂದೊಂದು ಕೊಂಡಿಯಲ್ಲಿ ರಾಜಕೀಯ ಪ್ರಜಾಪ್ರಭುತ್ವವಿರಬೇಕು. ಆಗ ಮಾತ್ರ ಹಿತಕರ ಸಮಾಜವೊಂದನ್ನು ಸ್ಥಾಪಿಸುವುದು ಸಾಧ್ಯ' (ಗಾಂಧೀಜಿ, ೧೯೪೮).

ಗ್ರಾಮೀಣ ಜನರಿಗೆ ಅತ್ಯಗತ್ಯವಾದ ಅಧಿಕಾರವನ್ನು ನೀಡುವಂಥ ವ್ಯವಸ್ಥೆ ಇಲ್ಲದ ಹೊರತು ಪ್ರಜಾಪ್ರಭುತ್ವದ ಅರ್ಥ ಪರಿಪೂರ್ಣವಾಗುವುದಿಲ್ಲ. ಈ ವ್ಯವಸ್ಥೆಯೊಂದಿಗೆ ಮಾತ್ರ ಗ್ರಾಮೀಣ ಜನತೆ ಸ್ವರಾಜ್ಯ ಕಲ್ಪನೆಯನ್ನು ನಿಜವಾದ ಅರ್ಥದಲ್ಲಿ ಅನುಭವಿಸಬಲ್ಲರು. ಇದರ ಉದ್ದೇಶದಿಂದ ಮಹಾತ್ಮ ಗಾಂಧೀಜಿಯವರ ಒತ್ತಡದ ಮೇರೆಗೆ 'ರಾಜ್ಯ ನಿರ್ದೇಶಕ ತತ್ವಗಳಲ್ಲಿ' ಪಂಚಾಯತ್ ರಾಜ್ ವ್ಯವಸ್ಥೆಯನ್ನು ಸಂಘಟಿಸುವ ಅವಕಾಶವನ್ನು ರಾಜ್ಯಗಳಿಗೆ ನೀಡಲಾಯಿತು. ಸಂವಿಧಾನದ ನಾಲ್ಕನೇ ಭಾಗದ, ೪೦ನೇ ವಿಧಿಯಲ್ಲಿ ಪ್ರತಿಯೊಂದು ರಾಜ್ಯವು ಗ್ರಾಮ ಪಂಚಾಯಿತಿಗಳನ್ನು ಸ್ಥಾಪಿಸಿ ಅವುಗಳು ಸಮರ್ಪಕ ಸ್ಥಳೀಯ ಸರ್ಕಾರಗಳಂತೆ ಕೆಲಸ ಮಾಡಲು ಅಧಿಕಾರಗಳನ್ನು ಕೊಡಬೇಕು ಎಂದು ತಿಳಿಸಿತು. ನಮ್ಮ ದೇಶದಲ್ಲಿರುವುದು 'ವಿಕೇಂದ್ರೀಕೃತ ಪ್ರಜಾಪ್ರಭುತ್ವ' ಹಾಗೂ ನಮ್ಮ ಗ್ರಾಮೀಣ ಜನತೆ 'ಪಂಚಾಯತ್ ರಾಜ್' ಗೆ ಒಳಪಟ್ಟಿದೆ. ಗ್ರಾಮೀಣ ಜನರಲ್ಲಿ ಪ್ರಜಾಪ್ರಭುತ್ವದ

ಬಗ್ಗೆ ತಿಳುವಳಿಕೆ ಬೆಳೆದು ಬಂದಂತೆ ಅಭಿವೃದ್ಧಿ ಕಾರ್ಯಗಳು ತೀವ್ರಗತಿಯಿಂದ ಪ್ರಗತಿಪಥದಲ್ಲಿ ಸಾಗುವುದರಲ್ಲಿ ಸಂದೇಹವಿಲ್ಲ. ಪಂಡಿತ ಜವಾಹರ್ ಲಾಲ್ ನೆಹರುರವರು ಹೇಳಿದಂತೆ 'ಪಂಚಾಯತ್‌ರಾಜ್ ಸಂಸ್ಥೆಗಳು ಪ್ರಜಾರಾಜ್ಯ ಮತ್ತು ಆಡಳಿತದ ತಳಹದಿಯಾಗಬೇಕು ಮತ್ತು ಪ್ರಜಾಪ್ರಭುತ್ವವಾದಿ ವಿಕೇಂದ್ರೀಕರಣ ಅಂದರೆ ಪಂಚಾಯತ್‌ರಾಜ್ ತತ್ವದ ಮೇಲೆ ನಿರ್ಮಾಣಗೊಂಡಿರುವುದು'.

ಆಧುನಿಕ ರಾಷ್ಟ್ರಗಳಲ್ಲಿ ಸರ್ಕಾರದ ಕಾರ್ಯಕ್ಷೇತ್ರ ದಿನೇ ದಿನೇ ಹೆಚ್ಚುತ್ತಿರುವುದರಿಂದ ಸ್ಥಳೀಯ ಆಡಳಿತ ಸಂಸ್ಥೆಗಳು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಆಡಳಿತಾಧಿಕಾರವು ಒಂದೇ ಸರ್ಕಾರದಲ್ಲಿ ಕೇಂದ್ರೀಕೃತವಾಗುವುದರಿಂದ ಸ್ಥಳೀಯ ಸಂಸ್ಥೆಗಳಿಗೆ ಹಾಗೂ ಅಗತ್ಯಗಳಿಗೆ ಸಾಕಷ್ಟು ಗಮನ ಹರಿಸಲು ಸಾಧ್ಯವಾಗುವುದಿಲ್ಲ. ಪಂಚಾಯತ್‌ರಾಜ್‌ವನ್ನು ಆರ್ಥಿಕ ಅಭಿವೃದ್ಧಿ, ಸಾಮಾಜಿಕ ಪ್ರಗತಿ ಹಾಗೂ ರಾಜಕೀಯ ಬೆಳವಣಿಗೆಯ ಅತ್ಯುತ್ತಮ ಸಾಧನವೆಂದು ಪರಿಗಣಿಸಲಾಗಿದೆ. ಈ ಪಂಚಾಯತ್‌ರಾಜ್ ಸ್ಥಳೀಯ ಆಡಳಿತ ಸಂಸ್ಥೆಗಳು ಭಾರತದ ರಾಜಕೀಯದ ಹೃದಯವಾಗಿದ್ದು ಭಾರತದ ಪ್ರಜಾಪ್ರಭುತ್ವದ ಆರೋಗ್ಯ ಇವುಗಳ ಕಾರ್ಯಾಚರಣೆಯನ್ನು ಅವಲಂಭಿಸಿದೆ. ಪ್ರಜಾಪ್ರಭುತ್ವದ ಯಶಸ್ಸು ಬಹಳಷ್ಟು ಈ ಸ್ಥಳೀಯ ಸಂಸ್ಥೆಗಳನ್ನು ಅವಲಂಬಿಸಿದೆ ( ಮುಖರ್ಜಿ, ೧೯೯೪ ).

೧೯೫೨ ರಲ್ಲಿ ಕ್ಷೇತ್ರಿಯ ಮಟ್ಟದಲ್ಲಿ, ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೆ ತರಲಾಯಿತು. ಬಲವಂತರಾಯ್ ಸಮಿತಿಯು ೧೯೫೭ರಲ್ಲಿ ಗ್ರಾಮ, ಕ್ಷೇತ್ರ ಮತ್ತು ಜಿಲ್ಲಾಮಟ್ಟಗಳಲ್ಲಿ ಮೂರು ಹಂತಗಳ ಪರಸ್ಪರ ಸಂಬಂಧವನ್ನು ಹೊಂದಿರುವ ಪ್ರಜಾಸತ್ತಾತ್ಮಕ ವಿಕೇಂದ್ರೀಕರಣರದ ಆಡಳಿತ ವ್ಯವಸ್ಥೆಯನ್ನು ತನ್ನ ವರದಿಯಲ್ಲಿ ಶಿಫಾರಸ್ಸು ಮಾಡಿತು.

೧೯೭೭ ರವರೆಗೂ ಈ ಶಾಸನ ಜಾರಿಯಲ್ಲಿತ್ತು. ನಂತರ ೧೯೭೭ ರಲ್ಲಿ ಶ್ರೀ ಅಶೋಕ ಮೆಹ್ತಾರವರ ಅಧ್ಯಕ್ಷತೆಯಲ್ಲಿ ಕೇಂದ್ರ ಸರ್ಕಾರವು ರಚಿಸಿದ ಸಮಿತಿಯು, ಇನ್ನೂ ವ್ಯವಸ್ಥಿತವಾದ ವಿಕೇಂದ್ರೀಕರಣವನ್ನು ಶಿಫಾರಸ್ಸು ಮಾಡಿತು. ಮುಂದೆ ಕೊಂಡಜ್ಜಿ ಬಸಪ್ಪ ಮತ್ತು ಅಶೋಕ ಮೆಹ್ತಾ ಸಮಿತಿಗಳ ಶಿಫಾರಸ್ಸುಗಳನ್ನು ಗಮನದಲ್ಲಿಟ್ಟುಕೊಂಡು ಕರ್ನಾಟಕದಲ್ಲಿ ರಾಮಕೃಷ್ಣ ಹೆಗಡೆ ನೇತೃತ್ವದ ಜನತಾ ಪಕ್ಷ ಸರ್ಕಾರವು ೧೯೮೩ ರಲ್ಲಿ ಹೊಸ ಪಂಚಾಯತ್ ಕಾಯ್ದೆಯನ್ನು ಸಿದ್ಧಪಡಿಸಿ ಶಾಸಕಾಂಗದ ಅಂಗೀಕಾರವನ್ನು ಪಡೆಯಿತು. ೧೯೮೩ ರಲ್ಲಿ ಅಧಿಕಾರಕ್ಕೆ ಬಂದ ಜನತಾ ಪಕ್ಷ ಸರ್ಕಾರವು ಸ್ಥಳೀಯ ಸಂಸ್ಥೆಗಳಲ್ಲಿ ಶೇಕಡ ೨೫ ರಷ್ಟು ಸ್ಥಾನವನ್ನು ಮಹಿಳೆಯರಿಗೆ ಮೀಸಲಿಟ್ಟಿತು.

"೧೯೮೯ ರ ಸಾಲಿನಲ್ಲಿ ದಿವಂಗತ ರಾಜೀವ್ ಗಾಂಧಿಯವರ ಸರ್ಕಾರ ಪಂಚಾಯತ್ ರಾಜ್ ಸಂಸ್ಥೆಗಳನ್ನು ಸಂವಿಧಾನದ ಚೌಕಟ್ಟಿನಲ್ಲಿ ಸೇರಿಸಲು ಪ್ರಯತ್ನಿಸಿತು. ವಿರೋಧ ಪಕ್ಷಗಳ ಒತ್ತಡದಿಂದ ಈ ಮಸೂದೆಯು ಬಿದ್ದು ಹೋಯಿತು. ೧೯೯೧ರಲ್ಲಿ ಕಾಂಗ್ರೆಸ್ ಸರಕಾರವು ಪಂಚಾಯತ್ ರಾಜ್ ತತ್ವಕ್ಕೆ ಬದ್ಧವಾಗಿತ್ತು. ಪುನಃ ಸಂವಿಧಾನದ ಮಸೂದೆಯನ್ನು ಜಾರಿಗೆ ತಂದಿತು. ೧೯೯೩ರ ಡಿಸೆಂಬರ್‌ನಲ್ಲಿ ಸಂವಿಧಾನದ ೭೩ ನೇ ತಿದ್ದುಪಡಿಯ ಮೂಲಕ ಪಂಚಾಯತ್ ರಾಜ್‌ಗೆ ಸಂವಿಧಾನದ ಸ್ವರೂಪವನ್ನು ಪಡೆದು ಕಾಯ್ದೆಯಾಗಿ ಮಾರ್ಪಟ್ಟಿತು." (ಕುಮಾರ್, ೧೯೯೪) .

ಪಂಚಾಯತ್ ರಾಜ್ ವ್ಯವಸ್ಥೆಯನ್ನು ಸ್ವಯಂ ಆಡಳಿತವೆಂಬ ಅರ್ಥದಲ್ಲಿ ಅರ್ಥೈಸಲಾಗಿದೆ. ಗ್ರಾಮೀಣ ಜನರ ಅಭಿವೃದ್ಧಿ ಹಾಗೂ ಜನರ ಆಶೋತ್ತರಗಳನ್ನು ಮೂರ್ತರೂಪಕ್ಕೆ ತರಲು ಗ್ರಾಮೀಣ ಜನರಿಗೆ ಅಧಿಕಾರ ನೀಡಲಾಗಿದೆ. 'ಜನರಿಗೆ ಅಧಿಕಾರ' ಎಂಬ ಪರಿಕಲ್ಪನೆಯನ್ನು ವಿಕೇಂದ್ರೀಕರಣದ ಪ್ರಕ್ರಿಯೆಯ ಮೂಲಕ ನಿಜವಾದ ಜನ ಕ್ರಾಂತಿಯ ವ್ಯವಸ್ಥೆಯನ್ನು ಬಲಗೊಳಿಸಲು ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳಲ್ಲಿ ಅಧಿಕಾರವನ್ನು ಕೇಂದ್ರೀಕರಿಸದೆ ಜಿಲ್ಲೆ, ತಾಲ್ಲೂಕು, ಗ್ರಾಮಮಟ್ಟಗಳಲ್ಲಿ ವಿಕೇಂದ್ರೀಕರಣಗೊಳ್ಳುವುದರಿಂದ ಜನರ ಕೈಗೆ ನಿಜವಾದ ಅಧಿಕಾರ ನೀಡಲಾಗಿದೆ ಎಂದು ಹೇಳಲಾಗಿದೆ. ೫೦ರ ದಶಕದಿಂದ ೯೦ರ ದಶಕದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆಯ ಪರಿಕಲ್ಪನೆಯ ವ್ಯಾಖ್ಯಾನದಲ್ಲಿ ಕೆಲವು ಅಂಶಗಳು ಸ್ಪಷ್ಟವಾಗಿರುತ್ತದೆ. ಇದು ಆಡಳಿತ ವಿಕೇಂದ್ರೀಕರಣದ ಅನುಕೂಲಕ್ಕಾಗಿ ಮಾಡಿಕೊಂಡ ಒಂದು ರಚನೆಯಾಗಿದೆ. (ನಾಯಕ್, ೧೯೯೫)

ಭಾರತ ಸಂವಿಧಾನದ ೭೩ ಮತ್ತು ೭೪ನೇ ತಿದ್ದುಪಡಿಗಳಿಂದ ಭಾರತದ ರಾಜಕೀಯ ವ್ಯವಸ್ಥೆ ಮೂರು ಹಂತದ್ದಾಗಿದೆ. ಈ ತಿದ್ದುಪಡಿಗಳ ಪ್ರಕಾರ ಮಹಿಳೆಯರಿಗೆ ಶೇ ೩೩.೩೩ ಮೀಸಲಾತಿಯನ್ನು ಕೊಡಲಾಗಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಜೊತೆಗೆ ಜಿಲ್ಲೆ, ತಾಲ್ಲೂಕು ಮತ್ತು ಗ್ರಾಮ ಹಂತಗಳಲ್ಲಿ ಸಾಕಷ್ಟು ಸ್ವಾಯತ್ತತೆ ಹೊಂದಿರುವ ಸ್ಥಳೀಯ ಸರ್ಕಾರಗಳಿಗೆ ಮಾನ್ಯತೆ ಇದೆ. ಈ ದಿಕ್ಕಿನಲ್ಲಿ ಕಳೆದ ದಶಕದಲ್ಲಿ ದೊಡ್ಡ ಹೆಜ್ಜೆ ಇಟ್ಟ ಹೆಗ್ಗಳಿಕೆ ಕರ್ನಾಟಕದ್ದು (ಮ್ಯಾಥ್ಯೂ , ೧೯೯೪) .

ಪುರುಷ ಪ್ರಧಾನ ಸಮಾಜದಲ್ಲಿ ಮಹಿಳಾ ಮೀಸಲಾತಿಯು ಕೇವಲ ಮೇಲ್ನೋಟದ ಬದಲಾವಣೆಯನ್ನು ಮಾತ್ರ ತರಬಲ್ಲದು. ಮನೆಗೆಲಸಕ್ಕೆ ಸೀಮಿತವಾದ ಮಹಿಳೆಯರ ಬದುಕು ಈ ಮೀಸಲಾತಿಯಿಂದಾಗಿ ವಿಸ್ತೃತಗೊಳ್ಳಬಹುದು. ಇಂದು ಮಹಿಳೆಯರು ವ್ಯಕ್ತಿಗತ ನೆಲೆಯಲ್ಲಿ ಹಾಗೂ ಸಂಘಟನಾತ್ಮಕ ನೆಲೆಯಲ್ಲಿ ಪಂಚಾಯತ್‌ರಾಜ್‌ನಲ್ಲಿ ಪಾಲುಗೊಳ್ಳುತ್ತಿದ್ದಾರೆ. ಇದೊಂದು ಮಹತ್ವದ ಸಂಗತಿಯಾಗಿದೆ.

ಸಂವಿಧಾನದ ೭೩ ಮತ್ತು ೭೪ನೇ ತಿದ್ದುಪಡಿಯ ಅನ್ವಯ ಮಹಿಳೆಯರಿಗೆ ಶೇಕಡಾ ೩೩.೩೩ರಷ್ಟು ಮೀಸಲಾತಿಯನ್ನು ಕೊಡಲಾಗಿದೆ. ಸಮಾಜವು ಪುರುಷ ಪ್ರಧಾನ ಸಮಾಜವಾಗಿರುವುದರಿಂದ ಮಹಿಳೆಯರು ಸ್ವೇಚ್ಛೆಯಿಂದ ಹಾಗೂ ಸ್ವಸಾಮರ್ಥ್ಯದಿಂದ ರಾಜಕೀಯ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಪೂರಕವಾದ ವಾತಾವರಣವಿಲ್ಲ. ಇಂದಿನ ರಾಜಕೀಯ ಪರಿಸ್ಥಿತಿಯಲ್ಲಿ ಮಹಿಳೆಯರು ಗಂಡಸರೊಂದಿಗೆ ಸ್ಪರ್ಧಿಸುವುದು ತೀರಾ ಕಷ್ಟಕರವಾದುದರಿಂದ ಮಹಿಳೆಯರಿಗೆ ಮೀಸಲಾತಿ ಅತ್ಯವಶ್ಯಕವಾಗಿದೆ. ಹೀಗೆ ಪಂಚಾಯತ್‌ರಾಜ್ ಕಾಯ್ದೆಯ ಪ್ರಕಾರ ಮಹಿಳೆಯರು ಸ್ಥಳೀಯ ಆಡಳಿತದ ಎಲ್ಲಾ ಹಂತಗಳಲ್ಲಿ ೩೩ ರಷ್ಟು ಪ್ರಾತಿನಿಧ್ಯ ಪಡೆಯಲು ಸಾಧ್ಯವಾಗಿದೆ (ಜೈನ್, ೧೯೯೪).

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಅನುಭವಿಯಾದ ರಾಜಕೀಯ ಪಕ್ಷಗಳ ನಡುವೆ ಮಹಿಳೆಯು ತಮ್ಮ ಕೈಗೆ ಬಂದಿರುವ ಈ ರಾಜಕೀಯ ಅಧಿಕಾರವನ್ನು ಸ್ವತಂತ್ರವಾಗಿ ಚಲಾಯಿಸಬಲ್ಲರಾ ? ಪ್ರಸ್ತುತ ಪರಿಸ್ಥಿತಿಯಲ್ಲಿ ಪುರುಷರ ಕೈಗೊಂಬೆಗಳಾಗಿ ಪ್ರತಿನಿಧಿಸುತ್ತಾರಾ, ಪುರುಷರಿಗಿಂತ ಭಿನ್ನವಾದ ನಿಲುವು ನಿರ್ಧಾರಗಳನ್ನು ತೆಗೆದುಕೊಳ್ಳಬಲ್ಲರಾ? ಈ ನಿರ್ಧಾರ ತೆಗೆದುಕೊಳ್ಳಲು ಪೂರಕವಾದ ವಾತಾವರಣವಿದೆಯಾ? ಈ ಮೀಸಲಾತಿಯಿಂದ ಗ್ರಾಮೀಣ ಮಟ್ಟದಲ್ಲಿ ಎಷ್ಟರ ಮಟ್ಟಿಗೆ ಪ್ರಯೋಜನವಾಗಬಹುದು? ಎಂಬುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## I. ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

೧. ಪ್ರಸ್ತುತ ಅಧ್ಯಯನವು ಸಾಂಸ್ಕೃತಿಕ ನೆಲೆಯನ್ನು ಆಧರಿಸಿದ ನಿದರ್ಶನಾತ್ಮಕ ಅಧ್ಯಯನವಾಗಿದೆ. ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಮಹಿಳೆಯರ ಕಾರ್ಯ ವೈಖರಿಯನ್ನು, ಭಾಗವಹಿಸುವಿಕೆಯನ್ನು ತಿಳಿದುಕೊಳ್ಳಲು ಮಹಿಳಾ ಪ್ರತಿನಿಧಿಗಳನ್ನು ಸಂದರ್ಶಿಸಿ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ. ಮಹಿಳಾ ಪ್ರತಿನಿಧಿಗಳ ಸಾಮಾಜಿಕ ಆರ್ಥಿಕ ಜೀವನದ ಹಿನ್ನೆಲೆಯನ್ನು ನೋಡಲಾಗಿದೆ. ಇದರಿಂದ ಎಷ್ಟರ ಮಟ್ಟಿಗೆ ಮಹಿಳಾ ಪ್ರತಿನಿಧಿಗಳು ಪಂಚಾಯತ್‌ರಾಜ್‌ದಲ್ಲಿ ಭಾಗವಹಿಸಿದ್ದಾರೆ ಎಂಬುದನ್ನು ತಿಳಿಯಬಹುದು. ಇದೊಂದು ಲಿಂಗಸಂವೇದಿ ಅಧ್ಯಯನವಾಗಿದೆ.

೨. ಪಂಚಾಯತ್ ರಾಜ್ ಮತ್ತು ಮಹಿಳೆ ಎಂಬ ಈ ಅಧ್ಯಯನ ವಿಷಯಕ್ಕೆ ಬಳ್ಳಾರಿ ಜಿಲ್ಲೆಯಲ್ಲಿರುವ ಹಗರಿಬೊಮ್ಮನಹಳ್ಳಿ ತಾಲ್ಲೂಕನ್ನು ಅಧ್ಯಯನ ಕ್ಷೇತ್ರವನ್ನಾಗಿ ಆಯ್ಕೆಮಾಡಿಕೊಳ್ಳಲಾಗಿದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕು ರಾಜ್ಯದಲ್ಲಿ ಸಂಪೂರ್ಣ ಗ್ರಾಮೀಣ ಪ್ರದೇಶವನ್ನು ಮತ್ತು ಅತಿ ಹೆಚ್ಚು ಕೃಷಿಕಾರ್ಮಿಕರನ್ನು ಹೊಂದಿದ್ದು ರಾಜ್ಯದಲ್ಲಿ ಪ್ರಥಮ ಸ್ಥಾನವನ್ನು ಪಡೆದಿದೆ. ಆದಕಾರಣ ಈ ಕ್ಷೇತ್ರವನ್ನು ಅಧ್ಯಯನ ಕ್ಷೇತ್ರವನ್ನಾಗಿ ಆಯ್ಕೆ ಮಾಡಿಕೊಳ್ಳಲು ಸೂಕ್ತವೆನಿಸಿದೆ. ಈ ತಾಲ್ಲೂಕು ನಾಲ್ಕು ಕಂದಾಯ ಹೋಬಳಿಗಳನ್ನು ಹೊಂದಿದ್ದು, ಒಟ್ಟು ೨೨

ಗ್ರಾಮ ಪಂಚಾಯಿತಿ, ಒಂದು ತಾಲ್ಲೂಕು ಪಂಚಾಯಿತಿ, ಒಂದು ಜಿಲ್ಲಾ ಪಂಚಾಯಿತಿ ಸದಸ್ಯರನ್ನು ಹೊಂದಿದೆ. (ಈ ತಾಲ್ಲೂಕಿನ ಕುರಿತ ಇನ್ನಿತರ ವಿಷಯಗಳನ್ನು ಅಧ್ಯಯನ ಕ್ಷೇತ್ರದ ಪರಿಚಯದಲ್ಲಿ ನೀಡಲಾಗಿದೆ.)

೩. ಕರ್ನಾಟಕದಲ್ಲಿ ೧೯೯೩ರ ಡಿಸೆಂಬರ್‌ನಲ್ಲಿ ನಡೆದ ಸ್ಥಳೀಯ ಸಂಸ್ಥೆಗಳ ಚುನಾವಣೆಗಳಲ್ಲಿ, ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಚುನಾಯಿತರಾಗಿದ್ದಾರೆ. ಮೀಸಲಾತಿಯನ್ವಯ ಗ್ರಾಮ ಪಂಚಾಯಿತಿಗಳಲ್ಲಿ ಶೇಕಡ ೪೫ ರಷ್ಟು ಮಹಿಳೆಯರು ಆಯ್ಕೆಯಾಗಿದ್ದಾರೆ. ಇದರಂತೆ ಹಗರಿಬೊಮ್ಮನಹಳ್ಳಿ ತಾಲ್ಲೂಕಿನಲ್ಲಿ ಸಹ ಶೇಕಡ ೪೩ರಷ್ಟು ಗ್ರಾಮ ಪಂಚಾಯಿತಿಗಳ ಚುನಾವಣೆಗಳಲ್ಲಿ ಮಹಿಳೆಯರು ಆಯ್ಕೆಯಾಗಿದ್ದಾರೆ.

೪. ಒಟ್ಟು ೨೨ ಗ್ರಾಮ ಪಂಚಾಯಿತಿಗಳಲ್ಲಿ ೧೨ ಗ್ರಾಮ ಪಂಚಾಯತಿಗಳನ್ನು ಹೋಬಳಿವಾರು ಆಯ್ಕೆಮಾಡಿಕೊಳ್ಳಲಾಗಿದೆ. ೧೨ ಗ್ರಾಮ ಪಂಚಾಯತಿಗಳಲ್ಲಿ ಒಟ್ಟು ಮಹಿಳಾ ಸದಸ್ಯರು ೯೦ ಜನ ಇದ್ದಾರೆ. ಇದರಲ್ಲಿ ೩೦ ಜನ ಮಹಿಳಾ ಸದಸ್ಯರನ್ನು ಆಯ್ಕೆಮಾಡಿಕೊಂಡು, ಇವರಿಂದ ಸಂದರ್ಶನದ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಹೆಚ್ಚಿನ ಮಾಹಿತಿಗಾಗಿ ೧೦ಜನ ಪುರುಷ ಸದಸ್ಯರಿಂದ ಮತ್ತು ೧೦ ಜನ ಸರ್ಕಾರಿ ಅಧಿಕಾರಿಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ೧೯೯೩ರ ಡಿಸೆಂಬರ್ ನಲ್ಲಿ ನಡೆದ ಸ್ಥಳೀಯ ಚುನಾವಣೆಯಲ್ಲಿ ಆಯ್ಕೆಯಾದ ಮಹಿಳೆಯರನ್ನು ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಈ ರೀತಿಯಾಗಿ ನಮ್ಮ ಅಧ್ಯಯನ ವ್ಯಾಪ್ತಿಯನ್ನು ಸೀಮಿತಗೊಳಿಸಲಾಗಿದೆ.

## II. ಅಧ್ಯಯನದ ಉದ್ದೇಶ

ಸಂವಿಧಾನದಲ್ಲಿ ಹೇಳಲಾದ ಸಮಾನ ಸ್ಥಾನದ ಹಕ್ಕು ವಾಸ್ತವ ರಾಜಕೀಯದಲ್ಲಿ ನಿರ್ಲಕ್ಷಿತವಾಗಿರುವ ವಿಚಾರವಾದ್ದರಿಂದ ಪಂಚಾಯಿತಿಗಳಲ್ಲಿ ಕನಿಷ್ಠ ಶೇಕಡ ೩೩ರಷ್ಟು ಮಹಿಳೆಯರಿಗೆ ಮೀಸಲಾತಿಯನ್ನು ಕೊಡಲಾಗಿದೆ. ಮಹಿಳೆಯರಿಗೆ ರಾಜಕೀಯ ಅಧಿಕಾರ ಒದಗಿಸುವ ಯತ್ನ ಕಳೆದ ಬಾರಿಯ ಸ್ಥಳೀಯ ಚುನಾವಣೆಗಳಲ್ಲಿ ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ನಡೆದಿದ್ದು, ಶೇಕಡಾ ೪೦ರಷ್ಟು ಮಹಿಳೆಯರು ಚುನಾಯಿತರಾಗಿದ್ದು ದಾಖಲೆಯೆನಿಸಿದೆ.

ಈ ಹಿನ್ನೆಲೆಯಲ್ಲಿ ಚುನಾಯಿತರಾದ ಮಹಿಳೆಯರ ಅಧಿಕಾರ ಎಷ್ಟರ ಮಟ್ಟಿಗೆ ಸಾಗಿದೆ? ಈ ಮೀಸಲಾತಿ ಗ್ರಾಮೀಣ ಮಟ್ಟದಲ್ಲಿ ಎಷ್ಟರ ಮಟ್ಟಿಗೆ ಪ್ರಯೋಜನವಾಗಿದೆ? ಮಹಿಳೆಯರು ತಮ್ಮ ಅಧಿಕಾರವನ್ನು ಎಷ್ಟರ ಮಟ್ಟಿಗೆ ಚಲಾಯಿಸುತ್ತಾರೆ? ಮೀಸಲಾತಿಯು ಅನಿವಾರ್ಯವೇ? ಎಂಬುದು ಅಧ್ಯಯನದ ಮುಖ್ಯ ಉದ್ದೇಶ.

ಪ್ರಸ್ತುತ ಈ ಅಧ್ಯಯನವನ್ನು ಈ ಕೆಳಕಂಡ ನಿರ್ದಿಷ್ಟ ಉದ್ದೇಶಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

೧. ಪಂಚಾಯತ್‌ರಾಜ್‌ನ ಐತಿಹಾಸಿಕ ಹಿನ್ನೆಲೆ ಮತ್ತು ಅದರ ಬೆಳವಣಿಗೆಯನ್ನು ಅಭ್ಯಸಿಸುವುದು.

೨. ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರ ಪಾತ್ರವನ್ನು ಪರೀಕ್ಷಿಸುವುದು.

೩. ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಮಹಿಳೆಯರ ಪಾತ್ರವನ್ನು ಪರೀಕ್ಷಿಸುವುದು.

೪. ಚುನಾಯಿತ ಮಹಿಳಾ ಪ್ರತಿನಿಧಿಗಳ ಆರ್ಥಿಕ ಮತ್ತು ಸಾಮಾಜಿಕ ಹಿನ್ನೆಲೆಯನ್ನು ಗುರುತಿಸುವುದು.

೫. ಚುನಾಯಿತ ಮಹಿಳೆಯರು ನೈಜವಾದ ಅಧಿಕಾರವನ್ನು ಚಲಾಯಿಸುತ್ತಾರೆಯೇ ಅಥವಾ ನಾಮ ಮಾತ್ರ ಅಧಿಕಾರವನ್ನು ಚಲಾಯಿಸುತ್ತಾರೆಯೇ ಎಂಬುದನ್ನು ಗುರುತಿಸುವುದು.

೬. ಸಂವಿಧಾನದ ೧೯೯೩ರ ಕಾಯ್ದೆಯ ಅನ್ವಯ ಅಂದರೆ, ೭೩ ಮತ್ತು ೭೪ನೇ ತಿದ್ದುಪಡಿ ಅನ್ವಯ ಮಹಿಳೆಯರಿಗೆ ಪಂಚಾಯತ್ ಚುನಾವಣೆಯಲ್ಲಿ ಸ್ಥಾನ ದೊರಕಿವೆಯೇ ಎಂದು ಅಧ್ಯಯನ ಮಾಡುವುದು.

೭. ಸಂವಿಧಾನದನ್ವಯ ಶೇಕಡಾ ೩೩.೩೩ ರಷ್ಟು ಮೀಸಲಾತಿ ಎಷ್ಟರ ಮಟ್ಟಿಗೆ ಪ್ರಯೋಜನಕಾರಿಯಾಗಿದೆ ಎಂಬುದನ್ನು ಗುರುತಿಸುವುದು ಮತ್ತು ಈ ಮೀಸಲಾತಿಯಿಂದ ಮಹಿಳೆಯರ ಅಭಿವೃದ್ಧಿ ಸಾಧ್ಯವೇ ಎಂಬುದನ್ನು ಕಂಡು ಹಿಡಿಯುವುದು.

೮. ರಾಜಕೀಯ ಪ್ರವೇಶದಿಂದ ಮಹಿಳೆಯರಲ್ಲಿ ಉಂಟಾದ ಪರಿಣಾಮಗಳನ್ನು ಪರೀಕ್ಷಿಸುವುದು.

೯. ಒಟ್ಟು ಈ ಅಧ್ಯಯನದಿಂದ ಕಂಡುಕೊಂಡ ಸಾಮಾಜಿಕ ಆರ್ಥಿಕ ಮತ್ತು ರಾಜಕೀಯ ಪರಿಣಾಮಗಳನ್ನು ಗುರುತಿಸುವುದು.

## III. ಅಧ್ಯಯನದ ಮಹತ್ವ

ಇತ್ತೀಚಿನ ವರ್ಷಗಳಲ್ಲಿ ಭಾರತದಲ್ಲಿ ಮಹಿಳೆಯರಿಗೆ ರಾಜಕೀಯ ಅಧಿಕಾರವನ್ನು ದೊರಕಿಸಿಕೊಡುವ ಯತ್ನ ಕೆಲವು ರಾಜ್ಯಗಳಲ್ಲಾದರೂ ನಡೆಯುತ್ತಿದೆ. ಕಳೆದ ಬಾರಿ ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ನಡೆದ ಚುನಾವಣೆಗಳಲ್ಲಿ ಶೇಕಡ ೪೦ ರಷ್ಟು ಮಹಿಳೆಯರು ಚುನಾಯಿತರಾಗಿದ್ದು ದಾಖಲೆಯಷ್ಟೇ ಅಲ್ಲ, ಅಧಿಕಾರ ಪಡೆಯುವಲ್ಲಿ ಮಹಿಳೆಯರು ಭಾಗವಹಿಸುವಿಕೆಯ ಪ್ರಕ್ರಿಯೆಗೆ ಸಿಕ್ಕ ಚಾಲನೆಯಾಗಿ ಇದು ಮಹತ್ವದ ಘಟನೆಯೆನಿಸುತ್ತದೆ. ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಶೇಕಡ ೩೩ರಷ್ಟು ಮೀಸಲಾತಿಯನ್ನು ನೀಡಲಾಗಿದೆ. ಇದರಿಂದ ಆಡಳಿತದ ಎಲ್ಲಾ ಸ್ತರಗಳಲ್ಲಿ ವಿಶೇಷವಾದ ಸ್ತ್ರೀ ಕೇಂದ್ರಿತ ತಿಳುವಳಿಕೆಯೊಂದು ಕೆಲಸಮಾಡುತ್ತದೆ ಎಂಬ ಅಂಶವನ್ನು ಅಧಿಕಾರದ ಮೇಲಿರುವವರು ಒಪ್ಪುವಂತೆ ಮಾಡಲಾಗಿದೆ. ಈ ವ್ಯವಸ್ಥೆ ಮಹಿಳೆಯರ ಮೂಲಭೂತ ಅವಶ್ಯಕತೆಗಳಿಗೆ ಮತ್ತು ಕಾಳಜಿಗಳಿಗೆ ಹೆಚ್ಚಿನ ಗಮನ ನೀಡಬೇಕೆಂಬುದನ್ನು ಎತ್ತಿಹಿಡಿಯುತ್ತಾರೆ. ಇಷ್ಟೆಲ್ಲಾ ಅವಕಾಶಗಳ ನಂತರವು ಈ ಸ್ಥಾನಗಳಿಗೆ ಆಯ್ಕೆಯಾಗುವಲ್ಲಿ ಮತ್ತು ಅದನ್ನು ದಕ್ಷರೀತಿಯಲ್ಲಿ ನಡೆಸಿಕೊಂಡು ಹೋಗುವಲ್ಲಿ ಈ ಮಹಿಳಾ ಪ್ರತಿನಿಧಿಗಳನ್ನು ತರಬೇತು ಮಾಡುವಲ್ಲಿ ಸರ್ಕಾರದೊಂದಿಗೆ ಮಹಿಳಾ ಸಂಘಟನೆಗಳು ಕೈಜೋಡಿಸುತ್ತಾ ಬಂದಿವೆ. (ಗಾಯಿತ್ರಿ, ೧೯೯೬).

ಈ ಮೀಸಲಾತಿಯ ಸೌಲಭ್ಯದಿಂದಾಗಿ ಹೆಚ್ಚಿನ ಪ್ರಮಾಣದಲ್ಲಿ ರಾಜಕೀಯದಲ್ಲಿ ಮಹಿಳೆಯರು ಭಾಗವಹಿಸಿದ್ದಾರೆ. ೧೯೮೩ರ ವ್ಯವಸ್ಥೆಯು ಕೇವಲ ರಾಜಕೀಯ ಅಧಿಕಾರವನ್ನು ನೀಡುವ ವ್ಯವಸ್ಥೆಯಾಗಿತ್ತು. ಈ ದಶಕದಲ್ಲಿ ಪಂಚಾಯತ್ ಸಂಸ್ಥೆಗಳು ಕೇವಲ ರಾಜಕೀಯ ಅಧಿಕಾರವನ್ನು ಮಾತ್ರ ಚಲಾಯಿಸುತ್ತಿದ್ದವು. ಆದರೆ ೭೩ ಮತ್ತು ೭೪ನೇ ಸಂವಿಧಾನ ತಿದ್ದುಪಡಿಗಳ ಪರಿಣಾಮವಾಗಿ ಪಂಚಾಯತ್‌ರಾಜ್ ವ್ಯವಸ್ಥೆಯು ಅಭಿವೃದ್ಧಿಯ ಸಾಧನವಾಗಿ ಪರಿಣಮಿಸಿತು. ಇಂದು ಭಾರತದಲ್ಲಿ ಐದು ಸ್ತರದ ಒಕ್ಕೂಟ ಪ್ರಭುತ್ವ ಅಸ್ತಿತ್ವಕ್ಕೆ ಬಂದಿದೆ. ಈ ಸ್ತರಗಳಾವುವೆಂದರೆ:
೧. ಕೇಂದ್ರ ಸರ್ಕಾರ ೨. ರಾಜ್ಯ ಸರ್ಕಾರ ೩. ಜಿಲ್ಲಾ ಪಂಚಾಯತಿ ೪. ತಾಲ್ಲೂಕು ಪಂಚಾಯತಿ ೫. ಗ್ರಾಮ ಪಂಚಾಯತಿ. (ಈ ರೀತಿಯ ಪದ್ಧತಿಯನ್ನು ಅನುಸರಿಸಿಕೊಂಡು ಬರುತ್ತಿದ್ದೇವೆ.) ಅಭಿವೃದ್ಧಿ ಪ್ರಕ್ರಿಯೆಯು ಕೆಳಗಿನಿಂದ ಮೇಲಕ್ಕೆ ಹರಿಯಬೇಕು. ಅಭಿವೃದ್ಧಿ ಚಟುವಟಿಕೆಗಳಲ್ಲಿ ಜನರು ಸಹಭಾಗಿಗಳಾಗಬೇಕು ಎಂಬ ಸಂಗತಿಗಳು ಇಂದು ಕೇವಲ ಸೈದ್ಧಾಂತಿಕ ಚರ್ಚೆಯಾಗಿಯೆ ಉಳಿದಿದೆ. ಇದು ಕಾರ್ಯರೂಪಕ್ಕೆ ಬಂದಿಲ್ಲ. (ನಾಯಕ್ , ೧೯೯೫) .

ಅಭಿವೃದ್ಧಿಯಲ್ಲಿ ಜನರು ಸಹಭಾಗಿಗಳಾಗಿರಬೇಕು. ಕೇವಲ ಪುರುಷರು ಹೆಚ್ಚಾಗಿ ರಾಜಕೀಯದಲ್ಲಿ ಭಾಗವಹಿಸುವುದರಿಂದ ಮಹಿಳೆಯರಿಗೆ ಹೆಚ್ಚಿನ ಅವಕಾಶಗಳು ಸಿಗುತ್ತಿರಲಿಲ್ಲ. ರಾಜಕೀಯವೆಂದರೆ ಪುರುಷರಿಗೆ ಸೀಮಿತವಾದದ್ದು,ಪುರುಷರಿಗೆ ಸಾಧ್ಯವಾಗುತ್ತದೆ ಎಂಬ ಪ್ರಚಲಿತ ಧೋರಣೆಯು ಬದಲಾಗುತ್ತಿದೆ. ಆದ್ದರಿಂದ ೧೯೮೦ರ ದಶಕದಲ್ಲಿ ಮಹಿಳೆಯರಿಗೆ ಶೇಕಡ ೨೦ರಷ್ಟು ಮೀಸಲಾತಿಯನ್ನು ಕೊಡಲಾಗಿತ್ತು. ಸಂವಿಧಾನದ ೭೩ ಮತ್ತು ೭೪ನೇ ತಿದ್ದುಪಡಿಯಲ್ಲಿ ಮಹಿಳೆಯರಿಗೆ ಶೇಕಡ ೩೩ ರಷ್ಟು ಮೀಸಲಾತಿಯನ್ನು ಕೊಡಬೇಕೆಂದು ಶಿಫಾರಸ್ಸು ಮಾಡಲಾಗಿತ್ತು. ಈ ಮೀಸಲಾತಿಯ ಹಕ್ಕಿನಿಂದಾಗಿ ಇವರು ಎಷ್ಟರ ಮಟ್ಟಿಗೆ ತಮ್ಮ ಅಧಿಕಾರವನ್ನು ಚಲಾಯಿಸಬಲ್ಲರು ಎಂಬುದು ಇಲ್ಲಿ ಪ್ರಮುಖ ಅಂಶವಾಗಿದೆ. ಪಂಚಾಯತ್ ಸಂಸ್ಥೆಗಳಲ್ಲಿ ಕೇವಲ ರಾಜಕೀಯ ಅಧಿಕಾರವನ್ನು ಕೊಟ್ಟರೆ ಸಾಲದು, ಜೊತೆಗೆ ನೀತಿ ನಿರ್ಧಾರಗಳಲ್ಲಿ ಆಯ್ಕೆ ಮಾಡುವ ಅವಕಾಶ ಮಹಿಳೆಯರಿಗೆ ಕೊಡಬೇಕು.

ಪ್ರಸ್ತುತ ಅಧ್ಯಯನದಲ್ಲಿ ಸ್ಥಳೀಯ ಸರ್ಕಾರಗಳಲ್ಲಿ ಮಹಿಳೆಯರ ಕಾರ್ಯ ನಿರ್ವಹಣೆ ಎಷ್ಟರ ಮಟ್ಟಿಗೆ ಸಾಗಿದೆ? ಈ ಮೀಸಲಾತಿಯ ಗ್ರಾಮೀಣ ಮಟ್ಟದಲ್ಲಿ ಎಷ್ಟರ ಮಟ್ಟಿಗೆ ಪ್ರಯೋಜನವಾಗಿದೆ? ಆಯ್ಕೆಗೊಂಡ ಮಹಿಳೆಯರು ನೈಜವಾದ ಅಧಿಕಾರವನ್ನು ಚಲಾಯಿಸುತ್ತಾರೆಯೇ? ಎಂಬುದನ್ನು ತಿಳಿಯುವುದು ಅಧ್ಯಯನದ ಮಹತ್ವವಾದ ವಿಷಯಗಳಾಗಿವೆ.

## IV. ಅಧ್ಯಯನ ವಿಧಾನ

ಪ್ರಸ್ತುತ ಅಧ್ಯಯನವು ಪಂಚಾಯತ್ ರಾಜ್‌ದಲ್ಲಿ ಮಹಿಳಾ ಮೀಸಲಾತಿಯ ಪ್ರಭಾವದ ಮೌಲ್ಯಮಾಪನದ ಅಧ್ಯಯನವಾಗಿದೆ. ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಮಾಹಿತಿಯನ್ನು ವಿಶ್ಲೇಷಿಸಿ ಫಲಿತಾಂಶಗಳನ್ನು ಕಂಡುಕೊಳ್ಳುವುದರ ಜೊತೆಗೆ ಗ್ರಾಮೀಣ ಮಟ್ಟದಲ್ಲಿ ಈ ಮೀಸಲಾತಿಯ ಪ್ರಯೋಜನವನ್ನು ಗುರುತಿಸಲಾಗಿದೆ. ಈ ಅಧ್ಯಯನಕ್ಕೆ ಸಂಬಂಧಿಸಿದಂತೆ, ಸಂವಿಧಾನದ ೭೩ ಮತ್ತು ೭೪ನೇ ತಿದ್ದುಪಡಿ ಅನ್ವಯ ಮಹಿಳೆಯರಿಗೆ ಶೇಕಡಾ ೩೩ ರಷ್ಟು ಮೀಸಲಾತಿಯನ್ನು ಕೊಡಬೇಕೆಂಬ ಶಿಫಾರಸ್ಸು ಮಾಡಿತ್ತು. ಈ ಕಾಯ್ದೆಯ ಅನ್ವಯ ಸ್ಥಳೀಯ ಸಂಸ್ಥೆಗಳಿಗೆ ಶೇಕಡ ೩೩ ರಷ್ಟು ಮೀಸಲಾತಿಯು ಈಗ ಕರ್ನಾಟಕದಲ್ಲಿ ಜಾರಿಯಲ್ಲಿದೆ. ಕಳೆದ ೧೯೯೩ರ ಕರ್ನಾಟಕದ ಸ್ಥಳೀಯ ಸಂಸ್ಥೆ ಚುನಾವಣೆಗಳಲ್ಲಿ ಶೇಕಡ ೩೩ಕ್ಕೂ ಹೆಚ್ಚು ಮಹಿಳೆಯರು ರಾಜಕೀಯದಲ್ಲಿ ಭಾಗವಹಿಸುತ್ತಿದ್ದಾರೆ. ಇದರಿಂದ ಉಂಟಾಗುವ ಪರಿಣಾಮ ಮತ್ತು ಬದಲಾವಣೆಗಳನ್ನು ನಮ್ಮ ಅಧ್ಯಯನದಲ್ಲಿ ಸಮನ್ವಯಗೊಳಿಸಲಾಗಿದೆ. ಇದರಿಂದಾಗಿ ಇದೊಂದು ವಿನೂತನ ಅಧ್ಯಯನವಾಗಿದೆ. ಸೈದ್ಧಾಂತಿಕ ಅಂಶಗಳು ಮತ್ತು ಆಚರಣಾತ್ಮಕ ಅಂಶಗಳನ್ನು ಇಲ್ಲಿ ಸಮನ್ವಯಗೊಳಿಸಲು ಪ್ರಯತ್ನಿಸಲಾಗಿದೆ.

ಇಲ್ಲಿ ಬಹುಳಾಕಾರಿ ಅಧ್ಯಯನ ವಿಧಾನವನ್ನು ಅಳವಡಿಸಿಕೊಂಡಿದ್ದೇವೆ. ಚುನಾಯಿತ ಮಹಿಳೆಯರನ್ನು ಏಕರೂಪ ಗುಂಪಾಗಿ ಪರಿಗಣಿಸಿಲ್ಲ. ಚುನಾಯಿತ ಮಹಿಳೆಯರ ವರಮಾನ, ಶಿಕ್ಷಣ, ಜಾತಿ, ರಾಜಕೀಯದಲ್ಲಿ ಭಾಗವಹಿಸುವಿಕೆ, ಪ್ರಗತಿಕಾರ್ಯಗಳ ಬಗ್ಗೆ ಪರಿಶೀಲನೆಯನ್ನು ಮಾಡಲಾಗಿದೆ. ಈ ಪರಿಶೀಲನೆಯಿಂದ ಈ ಮೀಸಲಾತಿಯ ಪ್ರಯೋಜನವನ್ನು ಗುರುತಿಸಲಾಗಿದೆ. ಮೀಸಲಾತಿಯ ಫಲಗಳು ಎಲ್ಲಾ ವರ್ಗ ಹಾಗೂ ಜಾತಿಗಳಿಗೆ ಒಂದೇ ಸ್ವರೂಪದಲ್ಲಿ ಮತ್ತು ಪ್ರಮಾಣದಲ್ಲಿ ದೊರೆಯುವುದಿಲ್ಲ. ಆದ್ದರಿಂದ ಮೀಸಲಾತಿಯ ಫಲಗಳು ಹರಿಯುವ ಸ್ವರೂಪವು ವರ್ಗ,ಜಾತಿ, ಶಿಕ್ಷಣ ಈ ಲಕ್ಷಣಗಳಿಂದ ಪ್ರಭಾವಿತವಾಗುತ್ತದೆ ಎಂಬುದು ಬಹಳ ಮುಖ್ಯವಾಗುತ್ತದೆ.

### IV i) ನಮೂನೆ ಆಯ್ಕೆ ಮತ್ತು ನಮೂನೆ ವಿನ್ಯಾಸ

ಪ್ರಸ್ತುತ ಅಧ್ಯಯನವನ್ನು ಉದ್ದೇಶಾತ್ಮಕ ನಮೂನೆ (Purposive Sampling) ಮಾದರಿಯಲ್ಲಿ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಉದ್ದೇಶ ಪೂರಕವಾಗಿ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಈ ತಾಲ್ಲೂಕಿನಲ್ಲಿ ನಾವು ಆಯ್ಕೆ ಮಾಡಿಕೊಂಡ ನಮೂನೆಯ ಎರಡು ಹೋಬಳಿಗಳ ೮ ಗ್ರಾಮ ಪಂಚಾಯಿತಿಗಳನ್ನು, ಉಳಿದ ಎರಡು ಹೋಬಳಿಗಳಿಂದ ೪ ಗ್ರಾಮ ಪಂಚಾಯಿತಿಗಳನ್ನು ಆಯ್ಕೆ ಮಾಡಿಕೊಂಡಿದ್ದೇವೆ. ೨ ಹೋಬಳಿಗಳಿಂದ ಹೆಚ್ಚು ಗ್ರಾಮ ಪಂಚಾಯಿತಿಗಳನ್ನು ಆಯ್ಕೆ ಮಾಡಲು ಕಾರಣ ಇವು

ದೊಡ್ಡ ಹೋಬಳಿಗಳು ಮತ್ತು ಮಹಿಳಾ ಅಧ್ಯಕ್ಷರಿರುವ ಗ್ರಾಮ ಪಂಚಾಯಿತಿಗಳಾಗಿದೆ. ಉಳಿದೆರಡು ಹೋಬಳಿಗಳ ೯ ಗ್ರಾಮ ಪಂಚಾಯತಿಗಳಲ್ಲಿ, ಒಂದು ಗ್ರಾಮ ಪಂಚಾಯಿತಿ ಮಾತ್ರ ಮಹಿಳಾ ಅಧ್ಯಕ್ಷಿಣಿಯನ್ನು ಹೊಂದಿದೆ ಮತ್ತು ಸಣ್ಣ ಹೋಬಳಿಯಾಗಿದ್ದರಿಂದ ನಾಲ್ಕು ಗ್ರಾಮ ಪಂಚಾಯತಿಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ. ನಮೂನೆಯ ವಿವರವನ್ನು ಅಧ್ಯಯನ ವ್ಯಾಪ್ತಿಯಲ್ಲಿ ನೀಡಲಾಗಿದೆ.

ನಮ್ಮ ನಮೂನೆಯಲ್ಲಿ ಮುಖ್ಯವಾಗಿ ಮಹಿಳಾ ಮೀಸಲಾತಿಗೆ ಸಂಬಂಧಿಸಿದಂತೆ ಎಲ್ಲಾ ಚಟುವಟಿಕೆಗಳನ್ನು ಸೇರುವಂತೆ ನೋಡಿಕೊಳ್ಳಲಾಗಿದೆ. ಹೆಚ್ಚು ಮಹಿಳಾ ಸದಸ್ಯರನ್ನು ಅವರ ಸ್ವಂತ ಸ್ಥಳಗಳಲ್ಲಿ , ಕೆಲವು ಮಹಿಳೆಯರನ್ನು ಪಂಚಾಯತಿ ಕಛೇರಿಗಳಲ್ಲಿ ಸಂದರ್ಶಿಸಲಾಗಿದೆ. ಈ ರೀತಿ ನಮೂನೆಯ ಆಯ್ಕೆ ಮತ್ತು ವಿನ್ಯಾಸವನ್ನು ರೂಪಿಸಿಕೊಳ್ಳಲಾಗಿದೆ.

**IV ii) ಪ್ರಾಥಮಿಕ ಮಾಹಿತಿ ಮತ್ತು ಆನುಷಂಗಿಕ ಮಾಹಿತಿ**

ಇದು ಮಹಿಳಾ ಮೀಸಲಾತಿಯನ್ನು ಕುರಿತ ಪ್ರಕ್ರಿಯೆ ಹಾಗೂ ಪರಿಣಾಮಗಳ ಮೌಲ್ಯಮಾಪನ ಅಧ್ಯಯನವಾಗಿರುವುದರಿಂದ ನಮ್ಮ ಅಧ್ಯಯನಕ್ಕೆ ಪ್ರಾಥಮಿಕ ಹಾಗೂ ಆನುಷಂಗಿಕ ಮಾಹಿತಿಯ ಅಗತ್ಯವಿರುತ್ತದೆ. ಪ್ರಾಥಮಿಕ ಮಾಹಿತಿಯನ್ನು ಮಹಿಳೆಯರನ್ನು ಸಂದರ್ಶಿಸುವ ಮೂಲಕ ಪಡೆಯಲಾಗಿದೆ ಇದಕ್ಕಾಗಿ ಸಂದರ್ಶನ ಸೂಚಿಯನ್ನು ರೂಪಿಸಲಾಗಿದ್ದು, ಈ ಸೂಚಿಯು ಮುಚ್ಚಿದ (closed) ಹಾಗೂ ತೆರೆದ (Open - ended) ಪ್ರಶ್ನೆಗಳನ್ನು ಹೊಂದಿದೆ. ಸಂದರ್ಶನ ಸೂಚಿ (Interview Schedule)ಯ ಅನ್ವಯ ಪ್ರಶ್ನೆಗಳನ್ನು ಕೇಳಲಾಗಿದ್ದು, ಮಾಹಿತಿದಾರರು ನೀಡಿದ ಉತ್ತರವನ್ನು ಅವರ ಸಮ್ಮುಖದಲ್ಲೇ ತುಂಬಲಾಗಿದೆ. ಸಾಮಾನ್ಯವಾಗಿ ಚುನಾಯಿತ ಮಹಿಳಾ ಸಂದರ್ಶನವು ಒಂದರಿಂದ ಎರಡು ತಾಸುಗಳವರೆಗೆ ಇರುತ್ತಿತ್ತು. ಇವರು ನೀಡಿದ ಮಾಹಿತಿಯನ್ನು ದತ್ತಾಂಶ ಪಟ್ಟಿ (Code Sheet) ಗೆ ಸೇರಿಸಿ ಅನಂತರ ಅದನ್ನು ಕೋಷ್ಟಕ (Tabular form ) ರೂಪದಲ್ಲಿ ಮಾಡಿ ನೀಡಲಾಗಿದೆ.

ಆನುಷಂಗಿಕ ಮಾಹಿತಿಯನ್ನು ಬಳ್ಳಾರಿ ಜಿಲ್ಲಾ ಜನಗಣತಿ ೧೯೯೧ ಕೈಪಿಡಿ, ತಾಲ್ಲೂಕು ಅಂಕಿ-ಅಂಶಗಳ ಮತ್ತು ಆರ್ಥಿಕ ಸಾಂಖ್ಯಿಕ ನಿರ್ದೇಶನಾಲಯ ಬೆಂಗಳೂರು ೧೯೯೫, ತಾಲ್ಲೂಕು ಪಂಚಾಯಿತಿ, ಹಗರಿಬೊಮ್ಮನಹಳ್ಳಿ ಇವರಿಂದ ಸಂಗ್ರಹಿಸಲಾಗಿದೆ.

## V. ಅಧ್ಯಯನ ಕ್ಷೇತ್ರದ ಕಿರು ಪರಿಚಯ

ಹಗರಿಬೊಮ್ಮನ ಹಳ್ಳಿ ತಾಲೂಕು, ಬಳ್ಳಾರಿ ಜಿಲ್ಲೆಯ ಪ್ರಮುಖ ತಾಲ್ಲೂಕು ಕೇಂದ್ರವಾಗಿದೆ. ಈ ತಾಲ್ಲೂಕನ್ನು ಉತ್ತರದಲ್ಲಿ ರಾಯಚೂರು ಜಿಲ್ಲೆ ಪ್ರದೇಶಗಳು, ಪೂರ್ವದಲ್ಲಿ ಹೊಸಪೇಟೆ ಮತ್ತು ಕೂಡ್ಲಿಗಿ ತಾಲ್ಲೂಕುಗಳು, ದಕ್ಷಿಣದಲ್ಲಿ ಹರಪನಹಳ್ಳಿ ತಾಲ್ಲೂಕು, ಪಶ್ಚಿಮದಲ್ಲಿ ಹಡಗಲಿ ತಾಲ್ಲೂಕುಗಳು ಸುತ್ತುವರಿದಿವೆ. ಹಗರಿಬೊಮ್ಮನಹಳ್ಳಿ ಮೊದಲು ಹಡಗಲಿ ತಾಲ್ಲೂಕಿನ ಒಂದು ಹೋಬಳಿ ಕೇಂದ್ರವಾಗಿತ್ತು. ೧೯೭೪ಕ್ಕಿಂತ ಮುಂಚೆ ಮಲ್ಲಾಪುರ ತಾಲ್ಲೂಕು ಎಂದು ಕರೆಯಲಾಗಿತ್ತು. ಅನಂತರ ಕೂಡ್ಲಿಗಿ ತಾಲ್ಲೂಕಿನ ೧೩ ಗ್ರಾಮಗಳನ್ನು ಹಡಗಲಿ ತಾಲ್ಲೂಕಿನಿಂದ ೨೨ ಗ್ರಾಮಗಳನ್ನು ಮಲ್ಲಾಪುರ ತಾಲ್ಲೂಕಿನಿಂದ ೬೦ ಗ್ರಾಮಗಳನ್ನು ತೆಗೆದುಕೊಂಡು ಮಲ್ಲಾಪುರ ತಾಲ್ಲೂಕಿನ ಬದಲು ಹಗರಿಬೊಮ್ಮನಹಳ್ಳಿಯನ್ನು ಹೊಸ ತಾಲ್ಲೂಕು ಕೇಂದ್ರವಾಗಿ ರಚಿಸಲಾಯಿತು . (ಕನ್ನಡ ವಿಷಯ ವಿಶ್ವಕೋಶ, ೧೯೭೯).

ಹಗರಿಬೊಮ್ಮನಹಳ್ಳಿ ತಾಲ್ಲೂಕು ೪ ಹೋಬಳಿಗಳನ್ನು ಹೊಂದಿದೆ. ೧. ಹಗರಿಬೊಮ್ಮನಹಳ್ಳಿ, ೨.ಕೋಗಳಿ, ೩. ಹಂಪಸಾಗರ, ೪. ತಂಬ್ರಹಳ್ಳಿ. ಒಟ್ಟು ೫೫ ಗ್ರಾಮಗಳಲ್ಲಿ ೫೨ ಜನವಸತಿ ಗ್ರಾಮಗಳು ೩ ಜನ ವಸತಿ ಇಲ್ಲದ ಗ್ರಾಮಗಳನ್ನು ಹೊಂದಿದೆ. ತಾಲ್ಲೂಕಿನ ಉತ್ತರದಲ್ಲಿ ತುಂಗಾಭದ್ರ ನದಿ ಮತ್ತು ಆ ನದಿಯ ಹಿನ್ನೀರು ಹರಡಿದ್ದು ತಾಲ್ಲೂಕು ಗಡಿಯಾದ ರಾಯಚೂರು ಜಿಲ್ಲೆಯನ್ನು ಈ ತಾಲ್ಲೂಕಿನಿಂದ ಬೇರ್ಪಡಿಸಲಾಗಿದೆ. ಚಿಕ್ಕಹಗರಿ ಈ ತಾಲ್ಲೂಕಿನ ಮುಖ್ಯ ನದಿಯಾಗಿದೆ. ತಾಲ್ಲೂಕಿನ ದಕ್ಷಿಣದಿಂದ ಉತ್ತಾರಭಿಮುಖವಾಗಿ ಹರಿದು ತುಂಗಾಭದ್ರ ನದಿಯನ್ನು ಸೇರುತ್ತದೆ. ಸಾಮಾನ್ಯ ಮಳೆಯಾಗುವ ಈ ತಾಲ್ಲೂಕಿನ ವ್ಯವಸಾಯಕ್ಕೆ ಅನುಕೂಲವಾಗಲು ಚಿಕ್ಕಿ ಹಗರಿ ನದಿಗೆ ದಕ್ಷಿಣಕ್ಕೆ ೪ ಕಿ.ಮೀ. ದೂರದಲ್ಲಿ ೨೫೦.೦೦ ಲಕ್ಷ ರೂ ವೆಚ್ಚದ ಚಿಕ್ಕ ಅಣೆಕಟ್ಟನ್ನು ಕಟ್ಟಿ ಹಗರಿಬೊಮ್ಮನಹಳ್ಳಿ ಜಲಾಶಯವನ್ನು ನಿರ್ಮಿಸಲಾಗಿದೆ. ಈ ಜಲಾಶಯದ ಎರಡು ನಾಲೆಗಳಲ್ಲಿ ಸುಮಾರು ೭೩೫೦ ಎಕರೆ ಭೂಮಿಗೆ ನೀರೊದಗಿಸುತ್ತದೆ.

ಈ ತಾಲ್ಲೂಕಿನಲ್ಲಿ ಕಪ್ಪು ಮಣ್ಣಿನ ಭೂಮಿ ಹೆಚ್ಚಾಗಿದ್ದು, ಮರಳು ಗಲ್ಲಿನ ಕೆಂಪು ಭೂಮಿಯು ಕಂಡು ಬರುವುದು. ಜೋಳ, ಕಬ್ಬು, ಭತ್ತ, ಶೇಂಗಾ, ಹತ್ತಿ, ಮೆಣಸಿನಕಾಯಿ ಮುಖ್ಯ ಬೆಳೆಗಳು.

ಬಳ್ಳಾರಿ ಜಿಲ್ಲೆಯಲ್ಲೇ ಅತಿ ಹೆಚ್ಚು ಎಣ್ಣೆಗಿರಣಿಗಳನ್ನು ಹೊಂದಿದ್ದು ಒಳ್ಳೆಯ ವಾಣಿಜ್ಯ ಕೇಂದ್ರವಾಗಿದೆ ಎಂದು ಹೇಳಬಹುದು. ಹಗರಿಬೊಮ್ಮನಹಳ್ಳಿ ಈ ತಾಲ್ಲೂಕಿನ ಆಡಳಿತ ಕೇಂದ್ರ ಹಾಗೂ ಮುಖ್ಯ ಪಟ್ಟಣವಾಗಿದೆ. ಹಗರಿಬೊಮ್ಮನಹಳ್ಳಿ ದಕ್ಷಿಣಕ್ಕಿರುವ ಕೋಗಳಿ ಗ್ರಾಮದಲ್ಲಿ ಜೈನ ದೇವಾಲಯದಲ್ಲಿ ತೀರ್ಥಂಕರ ವಿಗ್ರಹವಿದೆ. ದೇವಾಲಯದ ಒಳಗೆ ಮತ್ತು ಹತ್ತಿರದಲ್ಲಿಕೆಲವು ಶಾಸನಗಳಿವೆ. (ಕನ್ನಡ ವಿಷಯ ವಿಶ್ವಕೋಶ, ಅದೇ).

ಕೋಗಳಿಯಲ್ಲಿ ಚಾಲುಕ್ಯ, ಹೊಯ್ಸಳ, ಮತ್ತು ವಿಜಯನಗರ ಕಾಲದ ಕೆಲವು ಶಾಸನಗಳಿವೆ. ಹಗರಿಬೊಮ್ಮನಹಳ್ಳಿ ವಾಯುವ್ಯದಲ್ಲಿ ತುಂಗಭದ್ರ ನದಿಯ ಬಲದಂಡೆಯಲ್ಲಿರುವ ತಂಬ್ರಹಳ್ಳಿ ಸುಮಾರು 300 ವರ್ಷಗಳ ಹಿಂದೆ ಕಟ್ಟಿರುವ ರಂಗನಾಥ ದೇವಾಲಯವಿದೆ.

## ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಅಂಕಿ ಅಂಶಗಳು

| | |
|---|---|
| ವಿಸ್ತೀರ್ಣ | : ೯೭೫೯ (ಚದರ ಕಿಲೋಮೀಟರ್‌ಗಳು) |
| ಒಟ್ಟು ಜನ ಸಂಖ್ಯೆ | : ೧,೩೪,೬೮೯ |
| ಒಟ್ಟು ಪುರುಷರು | : ೬೭,೬೦೫ (ಶೇ.೫೦.೨೦) |
| ಒಟ್ಟು ಮಹಿಳೆಯರು | : ೬೭,೦೮೪ (ಶೇ.೪೯.೮೦) |
| ಪರಿಶಿಷ್ಟ ಜಾತಿ | : ೨೫,೦೦೦ (ಶೇ. ೧೮. ೫೬) |
| ಪರಿಶಿಷ್ಟ ಪಂಗಡ | : ೧,೨೦೦ (ಶೇ. ೦.೮೯) |
| ಅರಣ್ಯ ಪ್ರದೇಶ | : ೪,೪೮೨ (ಚ.ಕಿ.ಮೀ.) |
| ಬಿತ್ತನೆ ಪ್ರದೇಶ | : ೩,೬೭೬ (ಚ.ಕಿ.ಮೀ.) |
| ಬೀಳು ಭೂಮಿ | : ೨೮೯ (ಚ.ಕಿ.ಮೀ.) |
| ಒಟ್ಟು ಭೂಹಿಡುವಳಿಗಳು | : ೬೪,೬೨೩ ಚ.ಕಿ.ಮೀ. |
| ಒಟ್ಟು ಸಾಕ್ಷರತೆ | : ೩೭.೪೧% |
| ಮಹಿಳೆಯರ ಸಾಕ್ಷರತೆ | : ೨೬% |
| ಪುರುಷರ ಸಾಕ್ಷರತೆ | : ೪೯% |
| ಜನಸಂಖ್ಯೆ ಬೆಳವಣಿಗೆ ದರ | : ೩೬.೬೫% |
| ಜನ ಸಾಂದ್ರತೆ ಪ್ರಮಾಣ | : ೧೩೮ (ಪ್ರತಿ ಕಿ.ಮೀ.) |
| ಕೃಷಿ ಕಾರ್ಮಿಕರು | : ೯೩.೪೪% |

**ಮೂಲಃ ತಾಲ್ಲೂಕು ಅಂಕಿ ಅಂಶಗಳ ನೋಟ(೧೯೯೫)**

## ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಸಾಮಾಜಿಕ ಆರ್ಥಿಕ ಅಂಕಿ - ಅಂಶಗಳು

ಹಗರಿಬೊಮ್ಮನಹಳ್ಳಿ ತಾಲ್ಲೂಕು ಒಟ್ಟು ೧,೩೪,೬೮೯ ಜನ ಸಂಖ್ಯೆಯನ್ನು ಹೊಂದಿದ್ದು ಪುರುಷರು ೬೭,೬೦೫, ಮಹಿಳೆಯರು ೬೭,೦೮೪ ಜನ ಸಂಖ್ಯೆಯನ್ನು ಹೊಂದಿದೆ, ಪರಿಶಿಷ್ಟಜಾತಿ ೨೫,೦೦೦, ಪರಿಶಿಷ್ಟ ಪಂಗಡ ೧,೨೦೦, ಇದರ ಭೌಗೋಳಿಕ ವಿಸ್ತೀರ್ಣ ೯೭,೫೯೯ ಚ.ಕಿ.ಮೀ. ಇದೆ. ಇದರಲ್ಲಿ ಬಿತ್ತನೆ ಪ್ರದೇಶ, ೩,೬೭೬ ಕಿ.ಮೀ. ಬೀಳುಭೂಮಿ ೨೮೯ ಚ.ಕಿ.ಮೀ. ಹೊಂದಿದೆ. ಒಟ್ಟು ಭೂ ಹಿಡುವಳಿಗಳು ೬೪,೬೨೩ ಚ.ಕಿ.ಮೀ, ಅರಣ್ಯ ಪ್ರದೇಶ ೪,೪೮೨ ಚ.ಕಿ.ಮೀ. ಹೊಂದಿದೆ. ೧೯೯೧ ರ ಜನಗಣತಿಯ ಪ್ರಕಾರ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಸಾಕ್ಷರತೆಯ ಪ್ರಮಾಣ ಶೇ ೩೭.೪೧ ಇದೆ. ಜಿಲ್ಲೆಯಲ್ಲಿ ೪ನೇ ಸ್ಥಾನದಲ್ಲಿದೆ. ಪುರುಷರು ಸಾಕ್ಷರತೆ ಶೇ ೪೯, ಮಹಿಳೆಯರ ಸಾಕ್ಷರತೆ ಶೇಕಡ ೨೬ ಇದೆ. ಈ ತಾಲ್ಲೂಕು ಜನಸಂಖ್ಯಾ ಬೆಳವಣಿಗೆ ಶೇಕಡ ೩೬.೬೫ ಇದ್ದು ಜಿಲ್ಲೆಗೆ ಪ್ರಥಮ ಸ್ಥಾನದಲ್ಲಿದೆ. ರಾಜ್ಯಕ್ಕೆ ೪ನೇ ಸ್ಥಾನದಲ್ಲಿದೆ. ಜನಸಂಖ್ಯಾ ಸಾಂದ್ರತೆ ೧೩೮ ಪ್ರತಿ ಕಿ.ಮೀ. ಇದೆ.

ಹಗರಿಬೊಮ್ಮನಹಳ್ಳಿ ರಾಜ್ಯದಲ್ಲಿ ಸಂಪೂರ್ಣವಾಗಿ ಗ್ರಾಮೀಣ ಪ್ರದೇಶಗಳನ್ನು ಹೊಂದಿದ ತಾಲ್ಲೂಕಾಗಿದೆ. ರಾಜ್ಯಕ್ಕೆ ಪ್ರಥಮ ಸ್ಥಾನದಲ್ಲಿ, ಶೇ ೧೦೦ ರಷ್ಟು ಗ್ರಾಮೀಣ ಜನತೆಯನ್ನು ಹೊಂದಿದೆ. ಆದ್ದರಿಂದ ಈ ತಾಲ್ಲೂಕಿನ ಸಾಕ್ಷರತೆ ಪ್ರಮಾಣ ಕಡಿಮೆ ಇದೆ. ಮತ್ತು ಜನಸಂಖ್ಯೆಯ ಬೆಳವಣಿಗೆಯ ದರ ಶೇಕಡ ೫೬.೬೫ ರಾಜ್ಯಕ್ಕೆ ೪ನೇ ಸ್ಥಾನದಲ್ಲಿದೆ. ಈ ತಾಲ್ಲೂಕಿನಲ್ಲಿ ವ್ಯವಸಾಯ ನಿರತ ಕೆಲಸಗಾರರು ಶೇಕಡ ೯೩.೪೪ ದಲ್ಲಿ ರಾಜ್ಯಕ್ಕೆ ಅತಿಹೆಚ್ಚು ಕೃಷಿ ಕೆಲಸಗಾರರನ್ನು ಹೊಂದಿದ್ದು ರಾಜ್ಯದಲ್ಲಿ ಪ್ರಥಮ ಸ್ಥಾನದಲ್ಲಿದೆ. (೧೯೯೫ರ ತಾಲ್ಲೂಕು ಸಾಮಾಜಿಕ ಆರ್ಥಿಕ ಅಂಶಗಳು.)

## VI. ಅಧ್ಯಯನ ಕ್ಷೇತ್ರದ ಆಡಳಿತ ರಚನೆ

ಹಗರಿಬೊಮ್ಮನಹಳ್ಳಿ ತಾಲ್ಲೂಕಿಗೆ ತನ್ನದೇ ಆದ ವಿಧಾನಸಭಾ ಕ್ಷೇತ್ರವಿಲ್ಲ. ಈ ತಾಲ್ಲೂಕು ಕೂಡ್ಲಿಗಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯೊಳಗಡೆ ಬರುತ್ತದೆ. ತನ್ನದೇ ಆದ ವಿಧಾನಸಭಾ ಕ್ಷೇತ್ರವನ್ನು ಹೊಂದಿರದೇ ಇರುವುದರಿಂದ ತಾಲ್ಲೂಕಿನ ಅಭಿವೃದ್ಧಿಯ ಬಗ್ಗೆ ಅಷ್ಟೊಂದು ಗಮನ ನೀಡಿಲ್ಲ. (ತಾಲ್ಲೂಕಿನಲ್ಲಿ ಪಂಚಾಯತ್ ರಾಜ್ ವ್ಯವಸ್ಥೆ ಜಾರಿಯಲ್ಲಿ [illegible]ರುತ್ತದೆ.)

## ೧೯೯೩ ರಿಂದ ೧೯೯೮ ಅವಧಿಗೆ ಚುನಾಯಿತರಾದ
## ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಪಂಚಾಯತ್‌ರಾಜ್ ವ್ಯವಸ್ಥೆಯ ಸದಸ್ಯರ ವಿವರ.
### ಗ್ರಾಮ ಪಂಚಾಯಿತಿ ಸದಸ್ಯರುಗಳ ಲಿಂಗವಾರು ವಿವರ

ಒಟ್ಟು ಗ್ರಾಮ ಪಂಚಾಯಿತಿಗಳು
೨೨

ಒಟ್ಟು ಸದಸ್ಯರು
೩೪೭

ಮಹಿಳೆಯರು
೧೫೦ , (ಶೇಕಡ ೪೩.೨೨)

ಪುರುಷರು
೧೯೭, (ಶೇಕಡ ೫೬. ೭೭)

ಒಟ್ಟು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ಸದಸ್ಯರು
೧೨೧, (ಶೇಕಡ ೩೪.೮೭)

ಮಹಿಳೆಯರು
೫೦, (ಶೇಕಡ ೪೧.೩೨)

ಪುರುಷರು
೭೧, (ಶೇಕಡ ೫೮.೬೮)

ಒಟ್ಟು ಅಧ್ಯಕ್ಷರು
೨೨

ಮಹಿಳೆಯರು
೦೮, (ಶೇಕಡ ೩೬.೩೬)

ಪುರುಷರು
೧೪, (ಶೇಕಡ ೬೩.೬೪)

ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ ಅಧ್ಯಕ್ಷರು
೦೬, (ಶೇಕಡ ೨೭.೨೭)

ಮಹಿಳೆಯರು
೦೩, (ಶೇಕಡ ೫೦)

ಪುರುಷರು
೦೩, (ಶೇಕಡ ೫೦)

ಒಟ್ಟು ಉಪಾಧ್ಯಕ್ಷರು
೨೨

ಮಹಿಳೆಯರು
೧೦, (ಶೇಕಡ ೪೫.೪೫)

ಪುರುಷರು
೧೨, (ಶೇಕಡ ೫೪.೫೪)

ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡದ ಉಪಾಧ್ಯಕ್ಷರು
೦೫, (ಶೇಕಡ ೨೨. ೭೫)

ಮಹಿಳೆಯರು
೦೩, (ಶೇಕಡ ೧೩.೬೩)

ಪುರುಷರು
೦೨, (ಶೇಕಡ ೯.೦೯)

### ತಾಲ್ಲೂಕು ಪಂಚಾಯಿತಿ ಸದಸ್ಯರುಗಳ ಲಿಂಗವಾರು ವಿವರ

| | | |
|---|---|---|
| ೧. ಒಟ್ಟು ಸದಸ್ಯರು | ೧೪ | ಶೇಕಡವಾರು |
| ೨. ಮಹಿಳಾ ಸದಸ್ಯರು | ೦೫ | ೩೫. ೭೧ |
| ೩. ಪುರುಷ ಸದಸ್ಯರು | ೦೯ | ೬೪. ೨೯ |
| ೪. ಪ.ಜಾತಿ. ಸದಸ್ಯರು | ೦೩ | ೨೧. ೪೨ |
| ೫. ಪ.ಜಾತಿ. ಮಹಿಳಾ ಸದಸ್ಯರು | ೦೧ | ೩೩. ೩೩ |
| ೬. ಪ.ಜಾತಿ. ಪುರುಷ ಸದಸ್ಯರು | ೦೨ | ೬೬. ೬೪ |

### ಜಿಲ್ಲಾ ಪಂಚಾಯಿತಿ ಸದಸ್ಯರುಗಳ ಲಿಂಗವಾರು ವಿವರ

| | | |
|---|---|---|
| ೧. ಒಟ್ಟು ಸದಸ್ಯರು | ೦೪ | ಶೇಕಡ ವಾರು |
| ೨. ಮಹಿಳಾ ಸದಸ್ಯರು | ೦೧ | ೨೫ ಶೇಕಡ |
| ೩. ಪುರುಷ ಸದಸ್ಯರು | ೦೩ | ೭೫ ಶೇಕಡ |

## VII. ಅಧ್ಯಾಯಗಳ ವಿನ್ಯಾಸ

೦೧. ಮೊದಲ ಅಧ್ಯಾಯ ಪ್ರಸ್ತಾವನೆ, ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ, ಅಧ್ಯಯನದ ಉದ್ದೇಶ, ಮತ್ತು ಮಹತ್ವ, ಅಧ್ಯಯನ ವಿಧಾನ, ಮತ್ತು ಕ್ಷೇತ್ರ ಪರಿಚಯವನ್ನೊಳಗೊಂಡಿದೆ.

೦೨. ಎರಡನೆ ಅಧ್ಯಾಯದಲ್ಲಿ ಪಂಚಾಯತ್‌ರಾಜ್‌ದ ಐತಿಹಾಸಿಕ ಹಿನ್ನಲೆ, ಅದರ ಬೆಳವಣಿಗೆಯ ಸಂಕ್ಷಿಪ್ತ ಮಾಹಿತಿಯನ್ನು ನೀಡಲಾಗಿದೆ.

೦೩. ಚುನಾಯಿತ ಮಾಹಿತಿದಾರರ ಶಿಕ್ಷಣ, ವಯಸ್ಸು, ಜಾತಿ, ಉದ್ಯೋಗ, ಆದಾಯ ಅವರ ಗಂಡಂದಿರ ಉದ್ಯೋಗ ಮತ್ತು ಶಿಕ್ಷಣ ಮತ್ತು ಮಕ್ಕಳ ಶಿಕ್ಷಣ ಮಾಹಿತಿಯನ್ನು ಮೂರನೆ ಅಧ್ಯಾಯದಲ್ಲಿ ವಿವರಿಸಲಾಗಿದೆ.

೦೪. ಗ್ರಾಮಸಭೆಯಲ್ಲಿ ಚುನಾಯಿತ ಮಹಿಳೆಯರು ಚರ್ಚೆಯಲ್ಲಿ ಭಾಗವಹಿಸುವ ರೀತಿ, ಪುರುಷ ಸದಸ್ಯರ, ಸರ್ಕಾರಿ ಅಧಿಕಾರಿಗಳ ಮತ್ತು ಊರಿನ ಗ್ರಾಮಸ್ಥರ ಸಂದರ್ಶನದ ಮಾಹಿತಿಯು ನಾಲ್ಕನೆ ಅಧ್ಯಾಯ ಒಳಗೊಂಡಿದೆ.

೦೫. ಐದನೆ ಅಧ್ಯಾಯದಲ್ಲಿ ಚುನಾಯಿತ ಮಹಿಳೆಯರ ಆಯ್ಕೆ ಮತ್ತು ಕಾರ್ಯವೈಖರಿಯ ಬಗ್ಗೆ ಅಧ್ಯಯನ ಮಾಡಲಾಗಿದೆ.

೦೬. ಕೊನೆಯ ಅಧ್ಯಾಯವಾದ ಆರನೆಯ ಅಧ್ಯಾಯದಲ್ಲಿ ಎಲ್ಲಾ ಅಧ್ಯಾಯಗಳ ಸಾರಾಂಶ, ಮತ್ತು ಫಲಿತಗಳು ಮತ್ತು ಚುನಾಯಿತ ಮಹಿಳಾ ಸದಸ್ಯರ ಕುರಿತಾಗಿ ಸಲಹೆಗಳನ್ನು ನೀಡಲಾಗಿದೆ.

## ಅಧ್ಯಾಯ ೨
## ಪಂಚಾಯತ್ ರಾಜ್ ಐತಿಹಾಸಿಕ ಹಿನ್ನೆಲೆ ಮತ್ತು ಬೆಳವಣಿಗೆ

ಆಧುನಿಕ ರಾಷ್ಟ್ರಗಳಲ್ಲಿ ಸರ್ಕಾರದ ಕಾರ್ಯಕ್ಷೇತ್ರ ದಿನೇ ದಿನೇ ಹೆಚ್ಚುತ್ತಿರುವುದರಿಂದ ಸ್ಥಳೀಯ ಆಡಳಿತ ಸಂಸ್ಥೆಗಳು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಪ್ರಾಚೀನ ಕಾಲದಿಂದಲೂ ಇಂದಿನವರೆಗೂ ದೇಶದಲ್ಲಿ ಎಷ್ಟು ಬದಲಿಯಾದರೂ ಭಾರತದ ಹಳ್ಳಿಗಳ ಆಡಳಿತವು ಮಾತ್ರ ತನ್ನ ವೈಶಿಷ್ಟತೆಯನ್ನು ಉಳಿಸಿಕೊಂಡು ಬಂದಿದೆ. ಪಂಚಾಯತ್‌ರಾಜ್ ಸಾಮಾನ್ಯವಾಗಿ ಹಳ್ಳಿಯ ಆಡಳಿತವನ್ನು ಸೂಚಿಸುವುದು. ಸ್ವಾತಂತ್ರ್ಯ ಪೂರ್ವದಲ್ಲಿ ಹಳ್ಳಿಯ ಆಡಳಿತವು ಹಳ್ಳಿಯ ಪಂಚರಿಂದ ಸಮಸ್ಯೆಗಳು ನಡೆಯುತ್ತಿತ್ತು. ಸಮಸ್ಯೆಗಳು ಇವರಿಂದಲೇ ಪರಿಹಾರವಾಗುತ್ತಿದ್ದವು.

ಸ್ವಾತಂತ್ರ್ಯ ನಂತರ ಪಂಚಾಯತ್ ಆಡಳಿತವು ಕೇವಲ ಗ್ರಾಮ ಪಂಚಾಯಿತಿ ಆಡಳಿತ ಅಗಿರದೆ ಅದರ ಮೇಲ್ಮಟ್ಟದ, ಮಂಡಲ ಪಂಚಾಯತಿ, ತಾಲ್ಲೂಕು ಆಡಳಿತ ಹಾಗೂ ಇನ್ನೂ ವ್ಯಾಪಾಕವಾಗಿ ಜಿಲ್ಲಾ ಆಡಳಿತವಾಗಿ ಮಾರ್ಪಟ್ಟಿತು. ಒಟ್ಟಿನಲ್ಲಿ ಸಮಗ್ರ ಹಳ್ಳಿಗಾಡಿನ ಆಡಳಿತವು ಪಂಚಾಯತ್ ಆಡಳಿತವಾಗಿವೆ. ಪ್ರತಿಯೊಂದು ಗ್ರಾಮವು ಈ ರೀತಿ ಆಡಳಿತದಲ್ಲಿ ಸುಧಾರಣೆ ಹೊಂದಿ ತಮ್ಮ ಗ್ರಾಮಸ್ಥರ ಸರ್ವಾಂಗೀಣ ಉನ್ನತೆಗೆ ಪ್ರಯತ್ನಿಸಿದರೆ ಭಾರತದ ಮಾನವ ಅಭಿವೃದ್ಧಿಯಾಗುವಲ್ಲಿ ಸಂದೇಹವೇನೂ ಇಲ್ಲಾ. ಹೀಗೆ ಗ್ರಾಮೀಣ ಆಡಳಿತದಲ್ಲಿ ಪಂಚಾಯತ್ ರಾಜ್ಯ ತನ್ನದೇ ಆದ ಅಗತ್ಯತೆ ಹಾಗೂ ಪ್ರಾಮುಖ್ಯತೆಯನ್ನು ಪಡೆದಿದೆ. ಗ್ರಾಮೀಣ ಆಡಳಿತವು ನೇರ ಪ್ರಜಾಪ್ರಭುತ್ವಕ್ಕೆ ಅವಕಾಶ ಮಾಡಿಕೊಟ್ಟಿದೆ.

ಲಾರ್ಡ್ ರಿಪ್ಪನ್ ಭಾರತದ ಆಡಳಿತದಲ್ಲಿ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಜನಕನಾಗಿದ್ದಾನೆ. ೧೮೮೨ ಮೇ ೧೮ರಲ್ಲಿ ಈ ಸಂಸ್ಥೆಗಳ ಠರಾವನ್ನು ಜಾರಿಯಲ್ಲಿ ತಂದನು. ೧೯೧೯ರಲ್ಲಿ ಕಾಯ್ದೆಯಲ್ಲಿ ಸ್ಥಾನಿಕ ಸಂಸ್ಥೆಗಳಿಗೆ ಹೆಚ್ಚು ಸ್ವಾಯತ್ತತೆಯನ್ನು ನೀಡಲಾಗಿತ್ತು.

**ಪಂಚಾಯಿತಿಗಳ ರಚನೆ**

೧೯೧೯ ರಲ್ಲಿ ಪ್ರತಿಯೊಂದು ಗ್ರಾಮ ಅಥವಾ ಗ್ರಾಮಗಳ ಗುಂಪಿಗೆ ಒಂದು ಗ್ರಾಮ ಪಂಚಾಯತಿಯನ್ನು ರಚಿಸಲಾಯಿತು. ಪ್ರತಿಯೊಂದು ಪಂಚಾಯಿತಿಗೂ ಪ್ರತ್ಯೇಕ ಸಂಪನ್ಮೂಲಗಳಿದ್ದು ನಾಮಕರಣಗೊಂಡ ಅಧ್ಯಕ್ಷರಿದ್ದರು. ಅವುಗಳ ಪ್ರಗತಿ ಸಮಾಧಾನಕರವಾಗಿದ್ದರೆ ಚುನಾವಣೆಯ ಹಕ್ಕನ್ನು ಕೊಡಲಾಗುತ್ತಿತ್ತು. ಪಂಚಾಯಿತಿ ಹತೋಟಿ, ಮೇಲ್ವಿಚಾರಣೆ,ಪರಿಶೀಲನೆಯ ಅಧಿಕಾರವನ್ನು ಅಮಲ್ದಾರ್ (ತಹಸಿಲ್ದಾರ್) ಅವರಿಗೆ

ನೀಡಲಾಯಿತು. ಈ ಕ್ರಮದಿಂದ ಜಿಲ್ಲಾ ತಾಲ್ಲೂಕು ಅಂತರ ತಾಲ್ಲೂಕು ಮತ್ತು ಅಂತರ ಗ್ರಾಮ ಸೌಲಭ್ಯಗಳ ಮೇಲೆ ನಿರ್ಮಲೀಕರಣ, ಸಂಪರ್ಕ ವ್ಯವಸ್ಥೆ, ವೈದ್ಯಕೀಯ ಪರಿಹಾರ, ಮತ್ತಿತ್ತರ ಎಲ್ಲಾ ಸೌಲಭ್ಯಗಳನ್ನು ನೀಡಲು ಜಿಲ್ಲಾ ಮಂಡಳಿಗಳಿಗೆ ಸಂಪೂರ್ಣ ಸೌಮ್ಯ ದೊರಕಿತು. ೧೯೨೭ ರಲ್ಲಿ ತಾಲ್ಲೂಕು ಮಂಡಳಿಗಳನ್ನು ರದ್ದುಗೊಳಿಸಿದ್ದರಿಂದ ೧೯೨೭ರ ಫೆಬ್ರವರಿ ೧ ರಿಂದ ಜಿಲ್ಲಾ ಮಂಡಳಿ ನಿಯಮದ ಪ್ರಕಾರ ಜಿಲ್ಲಾ ಮಂಡಳಿಗಳನ್ನು ಪುನರ್ರಚಿಸಲಾಯಿತು. ೧೯೨೮-೨೯ ರಲ್ಲಿ ಪುರಸಭೆ ವಿಧಿಯನ್ನು ತಿದ್ದು ಪಡಿಗೊಳಿಸಿ ಮಹಿಳೆಯರು ಪುರಸಭೆ ಸದಸ್ಯರಾಗುವುದಕ್ಕೆ ಇದ್ದ ಅಡ್ಡಿಯನ್ನು ನಿವಾರಿಸಲಾಯಿತು.

**ವೆಂಕಟಪ್ಪ ಸಮಿತಿ**

ಸ್ಥಳೀಯ ಸಂಸ್ಥೆಗಳು ಮತ್ತು ೧೯೪೭-೪೮ ಅಭಿವೃದ್ಧಿ ಯೋಜನೆ ಎಷ್ಟರ ಮಟ್ಟಿಗೆ ನಿರೀಕ್ಷೆಯನ್ನು ಈಡೇರಿಸಿದ್ದವು ಮತ್ತು ಗ್ರಾಮೀಣ ಪುನರುದ್ಧಾರ ಮಾಡಲು ಅವುಗಳ ಸಂಘಟನೆ ಮತ್ತು ಕಾರ್ಯ ರೀತಿಯನ್ನು ಸುಧಾರಿಸುವುದಕ್ಕಾಗಿ ಇನ್ನೂ ಯಾವ ಕ್ರಮ ಕೈಗೊಳ್ಳಬಹುದು ಈ ಸಮಸ್ಯೆಗಳನ್ನು ಪರಿಶೀಲಿಸುವುದಕ್ಕಾಗಿ ೧೯೪೯ ರಲ್ಲಿ ವಿ. ವೆಂಕಟಪ್ಪ ಅವರ ಅಧ್ಯಕ್ಷತೆಯಲ್ಲಿ ಸ್ಥಳೀಯ ಸಂಸ್ಥೆಗಳ ತರದೂರು ಮತ್ತು ಸಮಸ್ಯೆಯ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿ ೧೯೫೦ ರ ಜೂನ್ ೧೨ ರಂದು ತನ್ನ ವರದಿಯನ್ನು ಸಲ್ಲಿಸಿತು. ಆದರೆ ಶಿಫಾರಸ್ಸುಗಳನ್ನು ೧೯೫೨ರ ಮೈಸೂರು ಗ್ರಾಮ ಪಂಚಾಯಿತಿಗಳ ಮತ್ತು ಜಿಲ್ಲಾ ಮಂಡಳಿಗಳ ಅಧಿ ನಿಯಮಗಳಲ್ಲಿ ಅಳವಡಿಸಲಾಯಿತು. ತತ್ಪರಿಣಾಮವಾಗಿ ಎರಡು ಹಂತದ ಸ್ಥಳೀಯ ಸ್ವಯಂ ಆಡಳಿತ ವ್ಯವಸ್ಥೆಗಳು ರೂಪುಗೊಂಡವು. ಅವುಗಳಲ್ಲಿನ ಜಿಲ್ಲಾ ಮಂಡಳಿಗಳನ್ನು ಪಂಚಾಯಿತಿಗಳು ಪರೋಕ್ಷವಾಗಿ ಚುನಾಯಿಸಿದವು. ಆದರೆ ಚುನಾವಣೆಗಳನ್ನು ನಡೆಸಲು ಯಾವ ಕ್ರಮವನ್ನು ತೆಗೆದುಕೊಳ್ಳಲಿಲ್ಲ. ೧೯೫೪ ಮಾರ್ಚ್ ೧ ರಿಂದ ಜಿಲ್ಲಾ ಮಂಡಳಿಗಳ ಕೆಲಸ ಸ್ಥಗಿತ. ಟಿ.ಹೆಚ್. ಚಂದ್ರಶೇಖರಯ್ಯ ಅವರ ಅಧ್ಯಕ್ಷತೆಯಲ್ಲಿಇನ್ನೊಂದು ಸಮಿತಿ, ಸ್ಥಳೀಯ ಮಂಡಳಿಗಳ ವಿಚಾರಣ ಸಮಿತಿಗಳನ್ನು ನೇಮಿಸಲಾಯಿತು. ಜಿಲ್ಲಾ ಮಂಡಳಿಗಳ ಅಗತ್ಯವಿದೆಯೇ, ಇಲ್ಲವೇ ಬದಲಾಗಿ ರಾಜ್ಯದಲ್ಲಿ ತಾಲ್ಲೂಕು ಮಂಡಳಿಗಳನ್ನು ಮುಂದುವರೆಸುವ ಅಗತ್ಯವಿದೆಯೇ, ಆ ಮಂಡಳಿಗಳಿಗೆ ಯಾವರೀತಿ ಚುನಾವಣೆ ನಡೆಸಬೇಕು. ಅವುಗಳ ಕಾರ್ಯಗಳೇನು ಹಣಕಾಸು ಮತ್ತು ಅಧಿಕಾರ ಎಷ್ಟು ಹಾಗೂ ಗ್ರಾಮ ಪಂಚಾಯಿತಿಗಳೊಂದಿಗೆ ಅವುಗಳ ಸಂಬಂಧ ಮತ್ತು ಮತ್ತಿತರ ಪ್ರಸಂಗತ ವಿಷಯಗಳನ್ನು ಪರಿಶೀಲಿಸಬೇಕಾಗುತ್ತದೆ. ಈ ಸಮಿತಿ ೧೯೫೪ರಲ್ಲಿ ವರದಿ ಸಲ್ಲಿಸಿ ಹೀಗೆ ಶಿಫಾರಸ್ಸು ಮಾಡಿತು.

೧. ಜಿಲ್ಲೆಯೊಳಗಿನ ತಾಲ್ಲೂಕು ಮಂಡಳಿಗಳ ಸದಸ್ಯರಿಂದ ಮತ್ತು ಸದಸ್ಯರೊಳಗಿಂದ ಆಯ್ಕೆಯಾದ ಸದಸ್ಯರುಳ್ಳ ಜಿಲ್ಲಾ ಮಂಡಳಿಗಳನ್ನು ಮುಂದುವರಿಸುವುದು.

೨. ತಾಲ್ಲೂಕ್ ಮಂಡಳಿಗಳನ್ನು ಪುನರ್‌ರಾಂಭಿಸುವುದು.

೩. ತಾಲ್ಲೂಕ್ ಮಂಡಳಿಯ ೩ನೇ ೧ ಭಾಗವನ್ನು ಗ್ರಾಮ ಪಂಚಾಯಿತಿಗಳ ಮತ್ತು ಪುರಸಭೆ ಮಂಡಳಿಗಳ ಪ್ರತಿನಿಧಿಗಳಿಗಾಗಿ ಕಾಯ್ದಿರಿಸುವುದು. ಹಾಗೂ ಉಳಿದ ೩ನೇ ೨ ಭಾಗವನ್ನು ತಾಲ್ಲೂಕಿನಲ್ಲಿ ನೇರ ಚುನಾವಣೆಯ ಮೂಲಕ ಭರ್ತಿ ಮಾಡುವುದು. ಈ ಸಮಿತಿ ಮೂರು ಹಂತದ ವಿಧಾನವನ್ನು ಶಿಫಾರಸ್ಸು ಮಾಡಿತು. ಅಲ್ಲದೇ ಪುರಸಭೆಯಂತಹ ನಗರ ಸಂಸ್ಥೆಯನ್ನು ಗ್ರಾಮೀಣ ಸಂಸ್ಥೆಗಳೊಂದಿಗೆ ಸೇರಿಸುವುದು ಗಮನಾರ್ಹ. ರಾಜ್ಯ ಪುನರ್ ವಿಂಗಡನೆಯಾದ ಬಳಿಕ ಜಾರಿಗೆ ತರಲಾದ ಕರ್ನಾಟಕದ ಗ್ರಾಮ ಪಂಚಾಯಿತಿಗಳ ಮತ್ತು ಸ್ಥಳೀಯ ಮಂಡಳಿಗಳ ಅಧಿನಿಯಮ ೧೯೫೯ ಇದು ಗ್ರಾಮೀಣ ಸಂಸ್ಥೆಗಳಿಗೆ ಸಂಬಂಧಿಸಿದ ಹಿಂದಿನ ಎಲ್ಲಾ ಶಾಸನಗಳಿಗೆ ಬರಲಾಗಿ ಜಾರಿಯಲ್ಲಿದ್ದು ಹೆಚ್ಚು ವ್ಯಾಪಕವಾದ ಹೊಸ ಶಾಸನವಾಗಿದೆ.

ಪಂಚಾಯಿತಿಯ ಅಧಿಕಾರವು ಮೂರು ವರ್ಷಗಳಷ್ಟು ಮೇಲಾಗಿ ೧೯೩೦ರ ಸ್ಥಳೀಯ ಮಂಡಳಿಗಳ ತಿದ್ದುಪಡಿಯಾದ ಶಾಸನದಿಂದ ಜಿಲ್ಲಾ ಮತ್ತು ತಾಲ್ಲೂಕು ಮಂಡಳಿಗಳಿಗೆ ಹೆಚ್ಚು ಅಧಿಕಾರ ಸಿಕ್ಕಿತು. ಇವುಗಳಿಗೆ ಪಂಚಾಯತ್ ವ್ಯವಹಾರಗಳ ಮೇಲೆ ಮತ್ತು ಗ್ರಾಮಾಭಿವೃದ್ಧಿ ನಿಧಿಯನ್ನು ರಚಿಸುವುದರ ಮೇಲೆ ಹತೋಟಿ ಲಭಿಸಿತು.

**ಕಾಳೆ ಸಮಿತಿ**

ಕಾಳೆ ಸಮಿತಿ ಎಲ್ಲಾ ಸ್ಥಳೀಯ ಸ್ವಯಂ ಆಡಳಿತ ಸಮಿತಿಯನ್ನು ೧೯೩೯ರಲ್ಲಿ ನೇಮಿಸಲಾಯಿತು. ಸರ್ಕಾರ ಮತ್ತು ಸ್ಥಳೀಯ ಸಂಸ್ಥೆಗಳ ನಡುವಣ ಆರ್ಥಿಕ ಸಂಬಂಧ ಅವುಗಳ ಆಡಳಿತ ಎಷ್ಟು ಮತ್ತು ಅವುಗಳ ಕಾರ್ಯಕ್ಷೇತ್ರ ವಿಸ್ತರಿಸುವ ಅವಶ್ಯಕತೆಯನ್ನು ಈ ಸಮಿತಿ ಪರಿಶೀಲಿಸಬೇಕಿತ್ತು ಆದರ ಶಿಫಾರಸ್ಸುಗಳನ್ನು ಬಹುಪಾಲು ಜಾರಿಗೊಳಿಸಲಾಯಿತು. ಸ್ವಾತಂತ್ರ್ಯ ನಂತರ ಸ್ಥಳೀಯ ಸಂಸ್ಥೆಗಳಿಗೆ ಸೂಕ್ತ ಗಮನ ಕೊಡಲಾಯಿತು.

**ಕರ್ನಾಟಕದ ಏಕೀಕರಣದ ನಂತರ**

ದೇಶದ ಇತರೆಡೆಗಳಂತೆ ಕರ್ನಾಟಕದಲ್ಲೂ ೧೯೫೭ರ ಬಲವಂತ ರಾಯ್ ಮೆಹ್ತಾ ಸಮಿತಿ ವರದಿಯ ಅನ್ವಯ ಪಂಚಾಯತ್ ರಾಜ್ ಪದ್ಧತಿಯನ್ನು ಜಾರಿಗೊಳಿಸಲಾಯಿತು. ಕರ್ನಾಟಕ ಗ್ರಾಮ ಪಂಚಾಯಿತಿಗಳು ಮತ್ತು ಸ್ಥಳೀಯ ಮಂಡಳಿಗಳ ಕಾಯ್ದೆ ೧೯೫೯ ಮೂರು ಹಂತದ ಪಂಚಾಯತ್ ರಾಜ್ ವ್ಯವಸ್ಥೆಯನ್ನು ರೂಪಿಸಿದವು. ಅವು ಯಾವುವೆಂದರೆ, ಗ್ರಾಮ ಪಂಚಾಯಿತಿಗಳು, ತಾಲ್ಲೂಕ್ ಅಭಿವೃದ್ಧಿ ಮಂಡಳಿಗಳು, ಜಿಲ್ಲಾ ಅಭಿವೃದ್ಧಿ ಮಂಡಳಿಗಳು. ಜನರು ಈ ಸಂಸ್ಥೆಗಳಿಗೆ ಅಧಿಕಾರ ಮತ್ತು ಜವಾಬ್ದಾರಿ ವರ್ಗಾಯಿಸಿ ಯೋಜಿತ ಕಾರ್ಯಕ್ರಮದಲ್ಲಿ ರೂಪಿಸುವ ಗುರಿಗಳನ್ನು ಈಡೇರಿಸುವುದು. ಅನಂತರ ೧೯೫೯ರ ಅಧಿನಿಯಮವನ್ನು ೧೯೬೧ರ ೨೬ನೆಯ, ೧೯೬೪ರ ೨೨ನೆಯ, ೧೯೬೫ರ ೫ನೆಯ, ೧೯೭ ರ ೪ನೇ, ಮತ್ತು ೧೯೭೧ರ ೨೧ ಅಧಿನಿಯಮಗಳ ಮೂಲಕ ತಿದ್ದುಪಡಿ ಮಾಡಲಾಯಿತು. ಪುನರ್ ವಿಂಗಡನೆಯ ಸಮಯದಲ್ಲಿ ಕಟ್ಟಿದ ಬೇರೆ

ಬೇರೆ ಪ್ರದೇಶಗಳಲ್ಲಿ ಜಾರಿಯಲ್ಲಿದ್ದ ಕಾಯಿದಗಳು ಈ ಹೊಸ ಕಾಯಿದೆಯನ್ನು ರದ್ದುಗೊಳಿಸಿತು. ೧೯೭೬ರ ಮಾರ್ಚ್ ಅಂತ್ಯದ ವೇಳೆಗೆ ರಾಜ್ಯದಲ್ಲಿನ ೨೬, ೮೨೬ ಹಳ್ಳಿಗಳಿಗೆ, ೯೬ ಪಟ್ಟಣ ಪಂಚಾಯಿತಿಗಳು, ಸೇರಿದಂತೆ ೮ ೪೬೧ ಪಂಚಾಯಿತಿಗಳು, ೧೭೫ರ ತಾಲ್ಲೂಕ್ ಅಭಿವೃದ್ಧಿ ಮಂಡಳಿ ೧೯ ಜಿಲ್ಲಾ ಅಭಿವೃದ್ಧಿ ಮಂಡಳಿಗಳು ಇದ್ದವು. ೧೯೭೯ರ ಹೊತ್ತಿಗೆ ೮, ೨೨೪ ಗ್ರಾಮ ಪಂಚಾಯಿತಿಗಳು, ೧೭೯ ಪಟ್ಟಣ ಪಂಚಾಯಿತಿಗಳು ೨೧೯ ಜಿಲ್ಲಾ ಅಭಿವೃದ್ಧಿ ಪರಿಷತ್ ಗಳು ರಾಜ್ಯದಲ್ಲಿದ್ದವು. ಸ್ವಾತಂತ್ರ್ಯದ ನಂತರದಲ್ಲಿ ಪಂಚಾಯತ್ ಆಡಳಿತವು ಹೊಸ ರೂಪರೇಷೆವನ್ನು ಪಡೆಯಿತು. ಗಾಂಧೀಜೀಯವರು ಹಳ್ಳಿಗಳ ಉದ್ಧಾರವೇ ದೇಶದ ಉದ್ಧಾರ ಎಂದು ತಿಳಿದು ೧೯೫೦ರ ಸಂವಿಧಾನ ೪ನೇ ಭಾಗದಲ್ಲಿ ರಾಜ್ಯ ನಿರ್ದೇಶಕ ತತ್ವಗಳ ೪೦ನೇ ವಿಧಿಯಲ್ಲಿ ಹಳ್ಳಿಯ ಪಂಚಾಯಿತಿಯನ್ನು ಸ್ವರಾಜ್ಯದ ಅಂಗವನ್ನಾಗಿಸಲು ಸೂಚಿಸಿದರು.

ಗ್ರಾಮೀಣ ಜನರಿಗೆ ಅತ್ಯಗತ್ಯವಾದ ಅಧಿಕಾರವನ್ನು ನೀಡುವಂಥಹ ವ್ಯವಸ್ಥೆ ಇಲ್ಲದ ಹೊರತು ಪ್ರಜಾ ಪ್ರಭುತ್ವದ ಅರ್ಥ ಪರಿಪೂರ್ಣವಾಗುವುದಿಲ್ಲ. ಈ ವ್ಯವಸ್ಥೆಯೊಂದಿಗೆ ಮಾತ್ರ ಗ್ರಾಮೀಣ ಜನರ ಸ್ವರಾಜ್ಯದ ಕಲ್ಪನೆಯ ನಿಜವಾದ ಅರ್ಥವನ್ನು ಅನುಭವಿಸಬಲ್ಲರು ಎಂದು ಗಾಂಧೀಜಿಯವರು ರಾಜ್ಯ ನಿರ್ದೇಶಕ ತತ್ವಗಳಲ್ಲಿ ಪಂಚಾಯತ್ ವ್ಯವಸ್ಥೆಯನ್ನು ಸಂಘಟಿಸುವ ಅವಕಾಶವನ್ನು ರಾಜ್ಯಗಳಿಗೆ ನೀಡಲಾಯಿತು. ಕೇಂದ್ರ ಸರ್ಕಾರ ೧೯೫೨ರಲ್ಲಿ ಜವಾಹರ್‌ಲಾಲ್ ನೆಹರು ರವರು ಅಮೇರಿಕಾದಿಂದ ಪ್ರಭಾವಿತರಾಗಿ ಗ್ರಾಮೀಣಾಭಿವೃದ್ಧಿ ಮತ್ತು ಗ್ರಾಮೀಣ ಜನರ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಸಮುದಾಯ ಯೋಜನೆಯನ್ನು ಜಾರಿಗೆ ತಂದರು. ಗ್ರಾಮೀಣ ಜನರ ಸಾಮಾಜಿಕ ಹಾಗೂ ಆರ್ಥಿಕ ಜೀವನದಲ್ಲಿ ಬದಲಾವಣೆಯನ್ನು ತರುವುದು ಈ ಯೋಜನೆಯ ಉದ್ದೇಶವಾಗಿತ್ತೆಂದು ಹೇಳಲಾಗಿತ್ತು. ಆದರೆ ಈ ಯೋಜನೆಯ ಸಂಪೂರ್ಣವಾಗಿ ವಿಫಲವಾಯಿತು. ಈ ಯೋಜನೆಯನ್ನು ಅನುಷ್ಠಾನಕ್ಕೆ ತರುವ ಪ್ರಕ್ರಿಯೆಯಲ್ಲಿ ಜನರ ಭಾಗವಹಿಸುವಿಕೆಯ ಗೈರುಹಾಜರಿಯೆ ಇದರ ವೈಫಲ್ಯತೆಗೆ ಕಾರಣವೆಂದು ಗುರುತಿಸಲಾಯಿತು.

೧೯೫೭ರಲ್ಲಿ ರಚಿತವಾದ ಬಲವಂತರಾಯ್ ಮೆಹತಾ ಸಮಿತಿಯು ಮೂರು ಹಂತದ ಪಂಚಾಯತ್ ರಾಜ್ ವ್ಯವಸ್ಥೆಯನ್ನು ರಚಿಸುವಂತೆ ಸಲಹೆ ನೀಡಿತು. ಈ ಸಲಹೆಯ ಅನ್ವಯ ೧೯೫೯ರ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು. ಇದು ಎರಡು ಪ್ರಮುಖ ಉದ್ದೇಶವನ್ನು ಹೊಂದಿತ್ತು.

೧. ವಿಕೇಂದ್ರೀಕರಣ,

೨. ಸರ್ಕಾರದ ಯೋಜಿತ ಕಾರ್ಯಕ್ರಮಗಳಲ್ಲಿ ಸ್ಥಳೀಯ ಜನರ ಭಾಗವಹಿಸುವಿಕೆ.

## ಗ್ರಾಮೀಣ ಪ್ರದೇಶಗಳಲ್ಲಿ ಸ್ಥಳೀಯ ಸರ್ಕಾರಗಳು

ಮಹಾತ್ಮಗಾಂಧೀಜಿಯವರು ಗ್ರಾಮಗಳ ಅಭ್ಯುದಯಕ್ಕೆ ಗ್ರಾಮ ಸ್ವರಾಜ್ಯವನ್ನು ಸ್ಥಾಪಿಸಲು ಆಗ್ರಹ ಪಡಿಸಿದ್ದರು. ಇವರ ಆಸೆಯನ್ನು ಪೂರೈಸಲು ಸಂವಿಧಾನದ ನಾಲ್ಕನೆ ಭಾಗದಲ್ಲಿ ಗ್ರಾಮ ಪಂಚಾಯಿತಿಗಳ ಸ್ಥಾಪನೆಗೆ ಅವಕಾಶ ಕಲ್ಪಿಸಿರುವುದು ಗಮನಾರ್ಹವೇ ಆಗಿದೆ. ಗ್ರಾಮೀಣ ಆಡಳಿತವನ್ನು ಸಮರ್ಪಕವಾಗಿ ಸಂಧಿಸಲು ಪ್ರಜಾಸತ್ತಾತ್ಮಕ ವಿಕೇಂದ್ರಿಕರಣ (Democratic Dencentralisation) ಬಹಳ ಮುಖ್ಯ ಎಂದು ಸಂವಿಧಾನ ಪಿತಾಮಹರ ಉದ್ದೇಶವಾಗಿತ್ತು (ಸಿದ್ದಯ್ಯ ಪುರಾಣಿಕ ೧೯೮೨ ).

## ೧೯೫೭ರ ಬಲವಂತರಾಯ್ ಮೆಹತಾ ಸಮಿತಿ

ಪ್ರಜಾಸತ್ತಾತ್ಮಕ ವಿಕೇಂದ್ರೀಕರಣ ಅಥವಾ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಜಾರಿಗೆ ತರಬೇಕೆಂದು ಬಲವಂತರಾಯ್ ಸಮಿತಿ ಶಿಫಾರಸ್ಸು ಮಾಡಿತು. ಇಂತಹ ಪದ್ಧತಿಯನ್ನು ಜಾರಿಗೆ ತರಬೇಕೆಂದು ೧೮೭೧ರಲ್ಲಿ ಬಂಗಾಳದ ಲೆ. ಗೌವರ್ನರ್ ಸಾಗಿದ್ದ ಸರ್ ಜಾರ್ಜ್ ಕ್ಯಾಂಪಬೆಲ್ ಶಿಫಾರಸ್ಸು ಮಾಡಿದ್ದರು. ಅಂದು ಈ ಸಲಹೆಯನ್ನು ಒಪ್ಪದೇ ಇದ್ದರು. ಬಲವಂತ ರಾಯ್ ಮೆಹತಾ ಸಮಿತಿ ಸೂಚಿಸಿದ ಅದೇ ಸಲಹೆಯನ್ನು ಸ್ವತಂತ್ರ ಭಾರತದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅಂಗೀಕರಿಸಿದವು. ಮೊದಲ ಬಾರಿಗೆ ಪಂಚಾಯತ್ ರಾಜ್ ವ್ಯವಸ್ಥೆಯು ರಾಜಸ್ಥಾನ ಮತ್ತು ಆಂಧ್ರಪ್ರದೇಶಗಳಲ್ಲಿ೧೯೫೯ ರಲ್ಲಿ ಅನುಷ್ಠಾನಕ್ಕೆ ಬಂದವು. ಕರ್ನಾಟಕದ ಶಾಸಕಾಂಗ ಅದೇ ವರ್ಷ ದಿ ಮೈಸೂರು ವಿಲೇಜ್ ಪಂಚಾಯತ್ಸ್ ಮತ್ತು ಲೋಕಲ್ ಬೋರ್ಡ್ಸ್ ಆಕ್ಟ್ ಅಂಗೀಕರಿಸಿ ೧೯೬೦ ರಿಂದ ಜಾರಿಗೊಳಿಸಿದರು. ಕ್ರಮೇಣ ಎಲ್ಲಾ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳ ಪಂಚಾಯತ್ ರಾಜ್ ಪದ್ಧತಿಯನ್ನು ಅಳವಡಿಸಿಕೊಂಡವು. ಸ್ಥಳೀಯ ಸರ್ಕಾರಗಳ ಸ್ಥಾಪನೆ ಮತ್ತು ನಿರ್ವಹಣೆ ರಾಜ್ಯ ಸರ್ಕಾರಗಳಿಗೆ ಸೇರಿರುವುದರಿಂದ ವಿವಿಧ ರಾಜ್ಯಗಳಲ್ಲಿ ಕೆಲವು ವಿಭಿನ್ನತೆ ಇರುವುದನ್ನು ಕಾಣುತ್ತೇವೆ.

## ಬಲವಂತರಾಯ್ ಮೆಹತಾರವರ ಮೂರು ಹಂತದ ಪಂಚಾಯತ್ ರಾಜ್ ವ್ಯವಸ್ಥೆ

೧. ಗ್ರಾಮ ಪಂಚಾಯಿತಿ

೨. ತಾಲ್ಲೂಕು ಸಮಿತಿ

೩. ಜಿಲ್ಲಾ ಪರಿಷತ್‌ನ್ನು ರಚಿಸಬೇಕೆಂದಿತ್ತು. ಆದರೆ ಎಲ್ಲಾರಾಜ್ಯಗಳು ಈ ಶಿಫಾರಸ್ಸಿಗೆ ಅನುಗುಣವಾಗಿ ಪಂಚಾಯತ್ ರಾಜ್ ಅಳವಡಿಸಿಕೊಂಡಿತ್ತು. ಮೊದಲು ಪಶ್ಚಿಮ ಬಂಗಾಳದಲ್ಲಿ ನಾಲ್ಕು ಹಂತದ ಸ್ಥಳೀಯ ಸರ್ಕಾರಗಳು ಗ್ರಾಮ ಪಂಚಾಯಿತಿ, ಅಂಚಲ್ ಪಂಚಾಯಿತಿ, ಅಂಚಲಿರ್ ಪಂಚಾಯಿತಿ ಮತ್ತು ಜಿಲ್ಲಾ ಪರಿಷತ್ತುಗಳಿದ್ದವು. ಆದರೆ ೧೯೭೩ ಇಲ್ಲಿನ ಸರ್ಕಾರ ಮೂರು ಹಂತದ ವ್ಯವಸ್ಥೆಯನ್ನು ಜಾರಿಗೆ ತಂದಿತು. ಹರಿಯಾಣ ಮತ್ತು ಒರಿಸ್ಸಾಗಳಲ್ಲಿ ಜಿಲ್ಲಾ ಪರಿಷತ್ ಗಳನ್ನು ರದ್ದುಗೊಳಿಸಲಾಗಿದೆ. ಅಸ್ಸಾಂ ಮತ್ತು ತಮಿಳು ನಾಡಿನಲ್ಲಿ ಜಿಲ್ಲಾಪರಿಷತ್‌ಗೆ ಸಮನಾಗಿರುವ ಸ್ಥಳೀಯ ಸರ್ಕಾರಕ್ಕೆ ಸಬ್ ಡಿವಿಜನ್ ಮಟ್ಟದಲ್ಲಿ ಸ್ಥಾಪಿಸಲಾಗಿದೆ.

## ವಿವಿಧ ರಾಜ್ಯಗಳಲ್ಲಿರುವ ಪಂಚಾಯತ್ ರಾಜ್ ಪದ್ಧತಿ

೧. ಮೂರು ಹಂತದ ಸ್ಥಳೀಯ ಸರ್ಕಾರಗಳಿರುವ ರಾಜ್ಯಗಳು ಆಂದ್ರ ಪ್ರದೇಶ, ಗುಜರಾತ್, ಹಿಮಾಚಲ ಪ್ರದೇಶ, ಮಹಾರಾಷ್ಟ್ರ, ಪಂಜಾಬ್ , ರಾಜಸ್ಥಾನ, ಬಿಹಾರ್, (೮ ಜಿಲ್ಲೆಗಳಲ್ಲಿ ಮಾತ್ರ) ಉತ್ತರ ಪ್ರದೇಶ, ತಮಿಳುನಾಡು, ಪಶ್ಚಿಮ ಬಂಗಾಳ ಮಾತ್ರ,ಕರ್ನಾಟಕ ೧೯೮೩ರ ಕಾಯ್ದೆಯ ಪ್ರಕಾರ ನಾಲ್ಕು ಹಂತದ ಜಿಲ್ಲಾ ಪರಿಷತ್ ತಾಲ್ಲೂಕು ಪಂಚಾಯತ್ ಸಮಿತಿ, ಮಂಡಲ ಪಂಚಾಯತಿ ಮತ್ತು ನ್ಯಾಯ ಪಂಚಾಯತಿ ಈ ಸ್ಥಳೀಯ ಸರ್ಕಾರಗಳನ್ನು ರಚಿಸಲು ಅವಕಾಶವಿದ್ದರೂ ಪ್ರಸ್ತುತ ಮೂರು ಹಂತದ ಸ್ಥಳೀಯ ಸರ್ಕಾರಗಳಿವೆ. ನ್ಯಾಯ ಪಂಚಾಯಿತಿಗಳನ್ನು ಇನ್ನು ರಚಿಸಿಲ್ಲ. ಗ್ರಾಮಸಭೆಗಳು ಸಂಬಂಧಪಟ್ಟ ಮಂಡಲ ಪಂಚಾಯಿತಿಗಳ ವ್ಯಾಪ್ತಿಯಲ್ಲಿ ಬರುವುದರಿಂದ ಹೊಸ ಕಾಯ್ದೆಯ ನಾಮಂಕಿತದಲ್ಲಿ ಇವುಗಳನ್ನು ಪ್ರತ್ಯೇಕವಾಗಿ ತಿಳಿಸಿಲ್ಲ.

೨. ಎರಡು ಹಂತದ ಸ್ಥಳೀಯ ಸರ್ಕಾರಗಳಿರುವ ರಾಜ್ಯಗಳು, ಅಸ್ಸಾಂ, ಹರಿಯಾಣ, ಮಧ್ಯಪ್ರದೇಶ ಮತ್ತು ಒರಿಸ್ಸಾ, ಬಿಹಾರದ ೨೩ ಜಿಲ್ಲೆಗಳಲ್ಲೂ ಈ ವ್ಯವಸ್ಥೆಯನ್ನು ಅಳವಡಿಸಲಾಗಿದೆ.

೩. ಒಂದು ಹಂತದ ಸ್ಥಳೀಯ ಸರ್ಕಾರಗಳಿರುವ ರಾಜ್ಯಗಳು ಕೇರಳ, ಜಮ್ಮು ಕಾಶ್ಮೀರ, ಮಣಿಪುರ, ಸಿಕ್ಕಂ, ತ್ರಿಪುರ, ಈ ರಾಜ್ಯಗಳಲ್ಲಿ ಗ್ರಾಮ ಪಂಚಾಯಿತಿಗಳು ಮಾತ್ರ ಇವೆ. ಪಂಚಾಯತಿ ರಾಜ್ ಪದ್ಧತಿಯಲ್ಲಿರುವ ಮೂರು ಹಂತದ ಸ್ಥಳೀಯ ಸರ್ಕಾರಗಳನ್ನು ಕೆಳಕಂಡಂತೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

### ೧ ಗ್ರಾಮ ಪಂಚಾಯಿತಿ (ಜಿ.ಪಿ.)

ಒಂದು ಅಥವಾ ಎರಡು ಮೂರು ಗ್ರಾಮಗಳನ್ನು ಸೇರಿಸಿ ಒಂದು ಗ್ರಾಮ ಪಂಚಾಯತಿಯನ್ನು ಬಹುತೇಕ ರಾಜ್ಯಗಳಲ್ಲಿ ರಚಿಸಲಾಗಿದೆ. ಸರಾಸರಿ ಒಂದು ಗ್ರಾಮ ಪಂಚಾಯಿತಿಯ ಜನಸಂಖ್ಯೆ ೧೯೩೫ ಇದೆಯೆಂದೂ ಅಂದಾಜು ಮಾಡಿದ್ದರೂ ಕೆಲವು ರಾಜ್ಯಗಳ ಗ್ರಾಮ ಪಂಚಾಯಿತಿಯ ಜನಸಂಖ್ಯೆ ಹೆಚ್ಚಾಗಿವೆ. ಕರ್ನಾಟಕದಲ್ಲಿ ಹೊಸ ಕಾಯ್ದೆ ಜಾರಿಗೆ ಬರುವಮೊದಲು ಒಂದು ಗ್ರಾಮ ಪಂಚಾಯತಿ ಜನಸಂಖ್ಯೆ ೧೫೦೦ ರಿಂದ ೧೦,೦೦೦ ದವರೆಗೆ ಇತ್ತೆಂದು ಅಂದಾಜು ಮಾಡಲಾಗಿತ್ತು. ಗ್ರಾಮ ಪಂಚಾಯಿತಿಯ ಸದಸ್ಯರನ್ನು ಪ್ರಜೆಗಳು ನೇರವಾಗಿ ಆಯ್ಕೆ ಮಾಡುತ್ತಾರೆ. ಬಿಹಾರ್ ನಲ್ಲಿ ಗ್ರಾಮ ಪಂಚಾಯಿತಿಯ ಕೆಲವು ಸದಸ್ಯರನ್ನು ನಾಮಕರಣ ಮಾಡಲಾಗುತ್ತದೆ. ಗ್ರಾಮ ಪಂಚಾಯಿತಿಯ ಸದಸ್ಯರಲ್ಲಿ ಒಬ್ಬರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗುತ್ತದೆ. ರಾಜಸ್ಥಾನದಲ್ಲಿ ಗ್ರಾಮ ಪಂಚಾಯಿತಿ ಅಧ್ಯಕ್ಷನನ್ನು (ಸರ್ ಪಂಚ್) ಪ್ರಜೆಗಳು ನೇರವಾಗಿ ಆಯ್ಕೆಮಾಡುತ್ತಾರೆ.

### ಗ್ರಾಮ ಪಂಚಾಯಿತಿಯ ಕರ್ತವ್ಯಗಳು

೧. ಗ್ರಾಮಗಳಲ್ಲಿ ರಸ್ತೆ ನಿರ್ಮಿಸುವುದು.

೨. ಬಾವಿಗಳನ್ನು ತೋಡಿಸುವುದು.

೩. ನೈರ್ಮಲ್ಯವನ್ನು ರಕ್ಷಿಸುವುದು.

೪. ಗ್ರಾಮೀಣ ಕೈಗಾರಿಕೆಗಳ ಸ್ಥಾಪನೆಗೆ ಪ್ರೋತ್ಸಾಹ ನೀಡುವುದು.

೫. ಸಣ್ಣ ಪುಟ್ಟ ವಿವಾದಗಳನ್ನು ಬಗೆಹರಿಸುವುದು.

೬. ಕುಟುಂಬ ಯೋಜನೆ ಬಗ್ಗೆ ಜನರಿಗೆ ತಿಳಿವಳಿಕೆ ಕೊಡುವುದು.

೭. ಸಹಕಾರ ಸಂಘಗಳನ್ನು ನಿರ್ವಹಿಸುವುದು.

೮. ಮಕ್ಕಳ ಶಿಕ್ಷಣ ಮತ್ತು ಕ್ಷೇಮದ ಬಗ್ಗೆ ಜವಬ್ದಾರಿ.

**೨. ತಾಲ್ಲೂಕು ಪಂಚಾಯಿತಿ (ಟಿ.ಪಿ.)**

ಇದು ಪಂಚಾಯತ್ ರಾಜ್ ಪದ್ಧತಿಯ ಮಧ್ಯದಲ್ಲಿರುವ ಸ್ಥಳೀಯ ಸರ್ಕಾರ ಪದ್ಧತಿಯಾಗಿದೆ. ವಿವಿಧ ರಾಜ್ಯಗಳಲ್ಲಿ ವಿವಿಧ ನಾಮಂಕಿತಗಳಿಂದ ಇವುಗಳನ್ನು ಕರೆಯಲಾಗುತ್ತದೆ. ಬಿಹಾರ್ ಮತ್ತು ಮಹಾರಾಷ್ಟ್ರಗಳಲ್ಲಿ ಪಂಚಾಯಿತಿ ಸಮಿತಿ ಎಂದು , ಉತ್ತರ ಪ್ರದೇಶದಲ್ಲಿ ಕ್ಷೇತ್ರ ಸಮಿತಿಯಂದು, ತಮಿಳುನಾಡಿನಲ್ಲಿ ಪಂಚಾಯಿತಿ ಯೂನಿಯನ್ ಕೌನ್ಸಿಲ್, ಗುಜರಾತಿನಲ್ಲಿ ತಾಲ್ಲೂಕು ಪಂಚಾಯಿತಿ ಎಂದು , ಕರ್ನಾಟಕದಲ್ಲಿ ೧೯೫೯ರ ಕಾಯ್ದೆಯ ಅನ್ವಯ ತಾಲ್ಲೂಕು ಅಭಿವೃದ್ಧಿ ಮಂಡಲಿ ಎಂದು ಕರೆಯಲಾಗಿತ್ತು. ಈ ತಾಲ್ಲೂಕು ಅಭಿವೃದ್ಧಿ ಮಂಡಲಿಗಳ ಸದಸ್ಯರು ನೇರವಾಗಿ ಪ್ರಜೆಗಳಿಂದ ಆಯ್ಕೆಯಾಗುತ್ತಾರೆ. ಇವರ ಅವಧಿ ೪ವರ್ಷ.ಚುನಾಯಿತ ಸದಸ್ಯರ ಸಂಖ್ಯೆ ೧೫ ರಿಂದ ೨೦ ರವರೆಗೆ ಇತ್ತು. ಅಲ್ಲದೇ ತಾಲ್ಲೂಕಿಗೆ ಸೇರಿದ ಶಾಸಕರು ಸಹ ಇದರ ಸದಸ್ಯರಾಗುತ್ತಾರೆ. ಮಂಡಲಿಯ ಸದಸ್ಯರಲ್ಲಿ ತಮ್ಮಲ್ಲಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರುಗಳನ್ನು ಆಯ್ಕೆ ಮಾಡಿಕೊಳ್ಳುತ್ತಾರೆ.

**ತಾಲ್ಲೂಕ್ ಪಂಚಾಯಿತಿಯ ಕರ್ತವ್ಯಗಳು**

೧. ತಾಲ್ಲೂಕು ಪಂಚಾಯಿತಿ ಸಮಿತಿ, ಗ್ರಾಮ ಪಂಚಾಯಿತಿ ಮತ್ತು ಜಿಲ್ಲಾ ಪರಿಷತ್ ಗಳ ನಡುವೆ ಕೊಂಡಿಯಂತೆ ಕಾರ್ಯನಿರ್ವಹಿಸುತ್ತದೆ.

೨. ವ್ಯವಸಾಯ, ಶಿಕ್ಷಣ, ಸಹಕಾರ, ಸಣ್ಣಕೈಗಾರಿಕೆಗಳ ಮುಂತಾದವುಗಳ ಪ್ರಗತಿಗೆ ಹೊರಾಡುತ್ತದೆ.

೩. ಶಾಲೆಗಳನ್ನು ಸ್ಥಾಪಿಸುವುದು.

೪. ಮರಗಿಡಗಳನ್ನು ನಡೆಸುವುದು.

೫. ಸಾರ್ವಜನಿಕ ಬಾವಿಗಳನ್ನು ತೋಡಿಸುವುದು.

೬. ಗ್ರಾಮೀಣ ಜನರಿಗೆ ತರಬೇತಿಯನ್ನು ಕೊಡುವುದು.

೭. ಗ್ರಾಮ ಪಂಚಾಯಿತಿಗಳ ಕರ್ತವ್ಯಗಳನ್ನು ಪರಿಶೀಲಿಸಿ ಬೇಕಾದ ಸಲಹೆಗಳನ್ನು ನೀಡುವುದು ಇದರ ಮುಖ್ಯ ಕರ್ತವ್ಯವಾಗಿದೆ.

೮. ಕ್ಷೇತ್ರಾಭಿವೃದ್ಧಿ ಅಧಿಕಾರಿ (ಬಿ.ಡಿ.ಓ.) ಇವರ ಮುಖ್ಯ ಕಾರ್ಯ ನಿರ್ವಾಹಕರಾಗಿದ್ದಾರೆ.

**ಜಿಲ್ಲಾ ಪರಿಷತ್ (ಜಡ್.ಪಿ.)**

ರಾಜಸ್ಥಾನ, ಮಹಾರಾಷ್ಟ್ರ ಮತ್ತು ಪಶ್ಚಿಮ ಬಂಗಳದಲ್ಲಿ ಜಿಲ್ಲಾ ಮಟ್ಟದ ಸ್ಥಳೀಯ ಸರ್ಕಾರವನ್ನು ಜಿಲ್ಲಾ ಪರಿಷತ್ ಎಂದು ಕರೆದರೆ, ಗುಜರಾತಿನಲ್ಲಿ ಜಿಲ್ಲಾ ಪಂಚಾಯತ್, ತಮಿಳುನಾಡಿನಲ್ಲಿ ಜಿಲ್ಲಾ ಅಭಿವೃದ್ಧಿ ಮಂಡಲಿ ಎಂದು ಅಸ್ಸಾಂನಲ್ಲಿಮೊಹಕಮ್ ಪರಿಷತ್ ಎಂದು ಕರೆಯಲಾಗಿದೆ. ಕರ್ನಾಟಕದ ೧೯೫೯ರ ಕಾಯ್ದೆಯ ಅನ್ವಯ ಜಿಲ್ಲಾ ಅಭಿವೃದ್ಧಿ ಮಂಡಲಿ ಎಂದು ಕರೆಯಲಾಗುತ್ತಿತ್ತು. ಆದರೆ ಹೊಸ ಕಾಯ್ದೆಯ ಅನ್ವಯ ಜಿಲ್ಲಾಪರಿಷತ್ ಎಂದು ಕರೆಯಲಾಗುತ್ತದೆ. ರಾಜಸ್ಥಾನದಲ್ಲಿ ಇದರ ಅಧ್ಯಕ್ಷ ಪ್ರಮುಖರನ್ನು (Pramukh) ಚುನಾಯಿತ ಮಂಡಲಿ ಆಯ್ಕೆ ಮಾಡುತ್ತದೆ. ಕರ್ನಾಟಕದ ಜಿಲ್ಲಾ ಅಭಿವೃದ್ಧಿ ಮಂಡಲಿ ಪ್ರತಿ ಜಿಲ್ಲೆಯಲ್ಲಿ ಪರೋಕ್ಷವಾಗಿ ರಚಿತಗೊಂಡು ಆಯಾ ಜಿಲ್ಲೆಯ ತಾಲ್ಲೂಕ್ ಅಭಿವೃದ್ಧಿ ಮಂಡಲಿಗಳ ಅಧ್ಯಕ್ಷರುಗಳು ಜಿಲ್ಲೆಯಿಂದ ಚುನಾಯಿತರಾಗಿದ್ದ ಶಾಸಕರು, ಎಂ.ಪಿ ಗಳು ಹಾಗೂ ಸರ್ಕಾರದಿಂದ ನೇಮಿಸಲ್ಪಟ್ಟವರು ಇದರ ಸದಸ್ಯರಾಗಿದ್ದರು. ಜಿಲ್ಲೆಯ ಜಿಲ್ಲಾಧಿಕಾರಿ (ಡಿ.ಸಿ.) ಇದರ ಅಧ್ಯಕ್ಷರಾಗಿದ್ದಾರೆ.

**ಜಿಲ್ಲಾ ಪರಿಷತ್ ಕರ್ತವ್ಯಗಳು**

ಕೆಲವು ರಾಜ್ಯಗಳಲ್ಲಿ ಜಿಲ್ಲಾಪರಿಷತ್ ಹೆಚ್ಚು ಅಧಿಕಾರ ಮತ್ತು ಕರ್ತವ್ಯಗಳನ್ನು ಹೊಂದಿದ್ದರೆ, ಇತರ ರಾಜ್ಯಗಳಲ್ಲಿ ಇದಕ್ಕಿಂತ ಹೆಚ್ಚು ಅಧಿಕಾರ ಕರ್ತವ್ಯಗಳು ಇಲ್ಲ. ೧೯೫೯ ರ ಕಾಯ್ದೆಯ ಅನ್ವಯ ಕರ್ನಾಟಕದಲ್ಲಿ ರಚಿತಗೊಂಡಿದ್ದ ಜಿಲ್ಲಾ ಮಂಡಳಿಯು ಕೇವಲ ಮೇಲ್ವಿಚಾರಣೆ ಮಾಡುವ ಮತ್ತು ಸಲಹೆ ನೀಡುವ ಸಂಸ್ಥೆಯಾಗಿತ್ತು. ಜಿಲ್ಲೆಯ ತಾಲ್ಲೂಕು ಮಂಡಲಿಗಳು ಬಜೆಟ್ ಮತ್ತು ಆಡಳಿತ ವರದಿಗಳನ್ನು ಚರ್ಚಿಸಿ ತನ್ನ ಅನುಮತಿಯನ್ನು ನೀಡಿತು. ಇವು ಪರಿಣಾಮಕಾರಿಯಾಗಿ ಕೆಲಸ ಮಾಡುವಂತೆ ಮಾಡಲು ಜಿಲ್ಲಾ ಪರಿಷತ್ ಮಾದರಿಯಲ್ಲಿ ಪುನರ್‌ರಚಿಸುವಂತೆ ಕೊಂಡಜ್ಜಿ ಬಸಪ್ಪ ಸಮಿತಿ ಶಿಫಾರಸ್ಸು ಮಾಡಿತ್ತು. ಈ ಶಿಫಾರಸ್ಸು ೧೯೮೩ರ ಕಾಯ್ದೆಯಲ್ಲಿ ಅಳವಡಿಸಿ ಜಿಲ್ಲಾ ಪರಿಷತ್ ನ್ನು ರಚಿಸಿ ಅದಕ್ಕೆ ಹೆಚ್ಚು ಅಧಿಕಾರವನ್ನು ಕೊಡಲಾಗಿದೆ.

**ಜಿಲ್ಲಾ ಪರಿಷತನ ಕರ್ತವ್ಯಗಳು**

೧. ಜಿಲ್ಲೆಯ ಒಟ್ಟಾರೆ ಅಭಿವೃದ್ಧಿ ಯೋಜನೆಯನ್ನು ರೂಪಿಸುವುದು

೨. ವ್ಯವಸಾಯ ಅಭಿವೃದ್ಧಿ

೩. ಬೀಜೋತ್ಪನ್ನ ಕೇಂದ್ರಗಳ ಸ್ಥಾಪನೆ.

೪. ಪಶು ಸಂಗೋಪನೆ.

೫. ಸಾರ್ವಜನಿಕ ಆರೋಗ್ಯ.

೬. ಪರಿಶಿಷ್ಟ ಜಾತಿ, ಹಿಂದುಳಿದ ವರ್ಗಗಳ ಕಲ್ಯಾಣ.

೭. ನೀರಾವರಿ ಸೌಲಭ್ಯ.

೮. ಗ್ರಾಮೀಣ ಕೈಗಾರಿಕೆಗಳ ಅಭಿವೃದ್ಧಿ.

## ಕರ್ನಾಟಕದ ಹೊಸ ಪಂಚಾಯತ್ ರಾಜ್ ಪದ್ಧತಿ

ಕೊಂಡಜ್ಜಿ ಬಸಪ್ಪ ಸಮಿತಿ ಮತ್ತು ಅಶೋಕ ಮೆಹತಾ ಸಮಿತಿಗಳ ಶಿಫಾರಸ್ಸುಗಳನ್ನು ಗಮನದಲ್ಲಿಟ್ಟು, ರಾಮಕೃಷ್ಣ ಹೆಗಡೆ ನೇತೃತ್ವದ ಜನತಾ ಸರ್ಕಾರ ೧೯೮೩ರಲ್ಲಿ ಹೊಸ ಪಂಚಾಯತ್ ರಾಜ್ ಪದ್ಧತಿಯ ಬಗ್ಗೆ ಮಸೂದೆಯನ್ನು ಸಿದ್ಧಪಡಿಸಿ ಶಾಸಕಾಂಗದ ಅಂಗೀಕಾರವನ್ನು ಪಡೆಯಿತು. ಇದು ರಾಷ್ಟ್ರಪತಿಯ ಸಮ್ಮತಿಯನ್ನು ಜುಲೈ ೧೦, ೧೯೮೫ರಂದು ಪಡೆಯಿತು. ಈ ಕಾಯ್ದೆಯನ್ನು, ದಿ ಕರ್ನಾಟಕ ಜಿಲ್ಲಾ ಪರಿಷತ್, ತಾಲ್ಲೂಕ್ ಪಂಚಾಯತ್ ಸಮಿತಿ, ಮಂಡಲ ಪಂಚಾಯತ್ಸ್ , ಮತ್ತು ನ್ಯಾಯ ಪಂಚಾಯತ್ಸ್ ಆಕ್ಟ್ ೧೯೮೩ ಎಂದು ಕರೆಯಲಾಗಿದೆ. ಇದು ಆಗಸ್ಟ್ ೧೪, ೧೯೮೫ ರಿಂದ ಜಾರಿಗೆ ಬಂದು ಇದರ ಅನ್ವಯ ಜನವರಿ ೨ ಮತ್ತು ೨೦, ೧೯೮೭ ರಂದು ಕ್ರಮವಾಗಿ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯಿತಿ ಚುನಾವಣೆಗಳನ್ನು ನಡೆಸಲಾಯಿತು. (ರಾಜಶೇಖರ ಎಚ್.ಎಂ. ೧೯೯೪ ).

**ಹೊಸಕಾಯ್ದೆಯ ಪ್ರಮುಖ ಲಕ್ಷಣಗಳು.**

ಪ್ರತಿ ಜಿಲ್ಲೆಯಲ್ಲಿ ಜಿಲ್ಲಾಪರಿಷತನ್ನು ರಚಿಸಲಾಗಿದೆ. ಇದರಲ್ಲಿ ಚುನಾಯಿತ, ಹಾಗೂ ನಾಮಕರಣಗೊಂಡ ಸದಸ್ಯರಿದ್ದಾರೆ. ಜಿಲ್ಲಾ ಪರಿಷತ್‌ನ ಚುನಾಯಿತ ಸದಸ್ಯರೊಬ್ಬರು ಸುಮಾರು ೩೫,೦೦೦ ಜನರನ್ನು ಮತ್ತು ಕೊಡಗು ಜಿಲ್ಲೆಯಲ್ಲಿ ೧೫,೦೦೦ ಜನರನ್ನು ಪ್ರತಿನಿಧಿಸುತ್ತಾರೆ. ಸದಸ್ಯರು ೫ ವರ್ಷದ ಅವಧಿಗೆ ಚುನಾಯಿತರಾಗುತ್ತಾರೆ. ಚುನಾಯಿತ ಸದಸ್ಯರ ಸಂಖ್ಯೆಯಲ್ಲಿ ಶೇಕಡಾ ೨೫ ರಷ್ಟು ಮಹಿಳೆಯರಿಗೆ, ಶೇಕಡ ೧೮ ರಷ್ಟು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ, ಬುಡಕಟ್ಟು ಜನಾಂಗದವರಿಗೆ ಮೀಸಲಿಡಲಾಗಿದೆ. ಜಿಲ್ಲಾ ಪರಿಷತ್ತಿಗೆ ಚುನಾಯಿತರಾದ ಸದಸ್ಯರು ತಮ್ಮಲ್ಲಿ ಒಬ್ಬರನ್ನು ಹಾಗೂ ಮತ್ತೊಬ್ಬರನ್ನು ಉಪಾಧ್ಯಕ್ಷರನ್ನಾಗಿ ಆಯ್ಕೆ ಮಾಡುತ್ತಾರೆ. ಇವರ ಸ್ಥಾನಮಾನ ಕ್ರಮವಾಗಿ ರಾಜ್ಯದ ಸಹಾಯಕ ಮಂತ್ರಿ ಮತ್ತು ಉಪಸಚಿವರಿಗೆ ಸಮನಾಗಿದೆ. ಸೆಕ್ಷನ್ ೧೭೦ರ ಪ್ರಕಾರ ಜಿಲ್ಲಾ ಪರಿಷತ್ ಕನಿಷ್ಟ ಪಕ್ಷ ತಿಂಗಳಿಗೊಮ್ಮೆ ಸಭೆ ಸೇರಬೇಕು. ೧೮೨ ಮತ್ತು ೧೮೯ರವರೆಗಿನ ಸೆಕ್ಷನ್ ಗಳು ಇವರ ಅಧಿಕಾರ ಮತ್ತು ಕರ್ತವ್ಯಗಳನ್ನು ತಿಳಿಸುತ್ತವೆ. ಜಿಲ್ಲೆಯ ಒಟ್ಟಾರೆ ಅಭಿವೃದ್ಧಿ ಯೋಜನೆಯನ್ನು ರೂಪಿಸಿ ಕಾರ್ಯಗತಗೊಳಿಸವುದು ಇದರ ಮುಖ್ಯ ಕರ್ತವ್ಯವಾಗಿದೆ. ಇದು ಸಕ್ರೀಯವಾಗಿ ಕೆಲಸ ಮಾಡಲು ೧೭೭ನೇ ಸೆಕ್ಷನ್ ಅನ್ವಯ ೯ ಸ್ಥಾಯಿ ಸಮಿತಿಗಳನ್ನು ರಚಿಸಲು ಅವಕಾಶವಿದೆ. ಅವುಗಳೆಂದರೆ : ೧. ಸಾಮಾನ್ಯ ಸ್ಥಾಯಿ ಸಮಿತಿ, ೨. ಹಣಕಾಸು ಮತ್ತು ಆಡಿಟ್ ಸಮಿತಿ , ೩. ಯೋಜನೆ ಮತ್ತು ಅಭಿವೃದ್ಧಿ ಸಮಿತಿ, ೪. ಕಾಮಗಾರಿ ಮತ್ತು ಸೌಕರ್ಯಗಳ ಸಮಿತಿ ೫. ಸಾಮಾಜಿಕ ನ್ಯಾಯ ಸಮಿತಿ, ೬. ಶಿಕ್ಷಣ ಸಮಿತಿ, ೭. ವ್ಯವಸಾಯ ಪಶುಸಂಗೋಪನಾ ಸಮಿತಿ, ೮. ಆರೋಗ್ಯ ಸಮಿತಿ, ೯. ಕೈಗಾರಿಕೆಗಳ ಸಮಿತಿ ಅಧ್ಯಕ್ಷ ಸೇರಿದಂತೆ ಪ್ರತಿಯೊಂದು ಸಮಿತಿಯ ಸದಸ್ಯರ ಸಂಖ್ಯೆ ೬ ಕ್ಕಿಂತ ಹೆಚ್ಚು ಇರಬಾರದು. ಜಿಲ್ಲಾ ಪರಿಷತ್ ನ

ಸದಸ್ಯರೊಬ್ಬರು ಎರಡು ಸಮಿತಿಗಳಲ್ಲಿ ಮಾತ್ರ ಸೇವೆಸಲ್ಲಿಸಲು ಅವಕಾಶವಿದೆ. ಈ ರೀತಿಯಾಗಿ ಜಿಲ್ಲಾ ಪರಿಷತ್ ನ ರಚನೆಯಾಗಿದೆ.

**೨. ತಾಲ್ಲೂಕು ಪಂಚಾಯಿತಿ ಸಮಿತಿ**

೧೯೮೩ರ ಕಾಯ್ದೆಯ ೧೩೫ನೇ ಸೆಕ್ಷನ್ ತಾಲ್ಲೂಕು ಪಂಚಾಯತಿ ಸಮಿತಿಗಳ ರಚನೆ ಬಗ್ಗೆ ತಿಳಿಸುತ್ತದೆ. ಒಂದು ತಾಲ್ಲೂಕು ಪಂಚಾಯಿತಿ ಸದಸ್ಯರೆಂದರೆ ತಾಲ್ಲೂಕಿನ ಶಾಸಕರು. ತಾಲ್ಲೂಕಿನಿಂದ ಚುನಾಯಿತರಾದ ಜಿಲ್ಲಾ ಪರಿಷತ್ ಸದಸ್ಯರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಮಂಡಲ ಪಂಚಾಯಿತಿಗಳ ಪ್ರಧಾನರು, ತಾಲ್ಲೂಕು ವ್ಯವಸಾಯ ಸಹಕಾರಿ ಮಾರಾಟ ಸಂಘದ ಅಧ್ಯಕ್ಷ, ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರು , ಕ್ಷೇತ್ರಾಭಿವೃದ್ಧಿ ಅಧಿಕಾರಿ ಇದರ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಾರೆ.

**ಕರ್ತವ್ಯಗಳು**

೧೩೬ರ ಸೆಕ್ಷನ್ ತಾಲ್ಲೂಕು ಪಂಚಾಯಿತಿ ಸಮಿತಿಯ ಕರ್ತವ್ಯಗಳನ್ನು ನಮೂದಿಸಿದೆ.

೧. ಮಂಡಲ ಪಂಚಾಯಿತಿ ಕಾರ್ಯ ನಿರ್ವಹಣೆ ಬಗ್ಗೆ ಸಲಹೆ ನೀಡುವುದು.

೨. ತಾಲ್ಲೂಕಿನಲ್ಲಿ ಕೈಗೊಳ್ಳಬೇಕಾದ ಅಭಿವೃದ್ಧಿ ಕಾರ್ಯಗಳಿಗೆ ಸಂಬಂಧಿಸಿದಂತೆ ಜಿಲ್ಲಾ ಪರಿಷತ್ ನಮೂದಿಸಿರುವ ಅಧಿಕಾರಗಳನ್ನು ಚಲಾಯಿಸುವುದು.

೩. ತಾಲ್ಲೂಕಿನಲ್ಲಿ ಜಿಲ್ಲಾ ಪರಿಷತ್ ಗೆ ಸೇರಿರುವ ಸ್ಥಿರಾಸ್ತಿ ಅಥವಾ ಅಭಿವೃದ್ಧಿ ಕಾರ್ಯಗಳ ಮೇಲ್ವಿಚಾರಣೆಯನ್ನು ಮಾಡುವುದು.

೪. ಕಾಲಕಾಲಕ್ಕೆ ಮಂಡಲ ಪಂಚಾಯಿತಿ ಕೆಲಸಗಳನ್ನು ಪರಿಶೀಲಿಸುವುದು.

೫. ಮಂಡಲ ಪಂಚಾಯಿತಿಗಳಿಗೆ ಮಾರ್ಗದರ್ಶನ ಮತ್ತು ಸಹಾಯ ನೀಡುವುದು.

೬. ವಿವಿಧ ಮಂಡಲ ಪಂಚಾಯಿತಿಗಳ ಕೆಲಸದಲ್ಲಿ ಸಮನ್ವಯವನ್ನುಂಟು ಮಾಡುವುದು.

೭. ಜಿಲ್ಲಾ ಪರಿಷತ್ ಮತ್ತು ಸರ್ಕಾರವಹಿಸುವ ಇತರೆ ಕರ್ತವ್ಯಗಳನ್ನು ಮಾಡುವುದು.

**೩. ಮಂಡಲ ಪಂಚಾಯಿತಿ**

ಮಂಡಲ ಪಂಚಾಯಿತಿಯ ರಚನೆಯನ್ನು ೫ನೇ ಸೆಕ್ಷನ್‌ನಲ್ಲಿ ಕಾಣಬಹುದು. ೮,೦೦೦ ರಿಂದ ೧೨,೦೦೦ಕ್ಕೂ ಮೀರದ ಜನಸಂಖ್ಯೆಯುಳ್ಳ ರೆವಿನ್ಯೂ ಗ್ರಾಮ ಅಥವಾ ಗ್ರಾಮಗಳ ಗುಂಪಿಗೆ ಒಂದು ಮಂಡಲ ಪಂಚಾಯಿತಿ ಎಂದು ಘೋಷಿಸುವ ಅಧಿಕಾರ ಜಿಲ್ಲಾಧಿಕಾರಿಗಿದೆ. ಪ್ರತಿ ೪೦೦ ಜನರಿಗೆ ಒಬ್ಬ ಸದಸ್ಯರನ್ನು ಪ್ರಜೆಗಳು ೫ ವರ್ಷದ ಅವಧಿಗೆ ಚುನಾಯಿಸುತ್ತಾರೆ. ಆದ್ದರಿಂದ ಮಂಡಲ ಪಂಚಾಯಿತಿಗಳ ಸದಸ್ಯರ ಸಂಖ್ಯೆ ೨೦ ರಿಂದ ೩೦ರವರೆಗೆ ಇರುತ್ತದೆ. ಚುನಾಯಿತ ಸದಸ್ಯರಲ್ಲಿ ಶೇಕಡ ೨೫ರಷ್ಟನ್ನು ಮಹಿಳೆಯರಿಗೆ ಮೀಸಲಿಡಲು ಅವಕಾಶವಿದೆ.

ಚುನಾಯಿತ ಸದಸ್ಯರಲ್ಲಿ ಒಬ್ಬನನ್ನು ಪ್ರಧಾನರನ್ನಾಗಿ ಮತ್ತೊಬ್ಬರನ್ನು ಉಪಪ್ರಧಾನರನ್ನಾಗಿ ಆಯ್ಕೆ ಮಾಡುವರು.

**ಅಧಿಕಾರಗಳು ಮತ್ತು ಕರ್ತವ್ಯಗಳು**

ಸೆಕ್ಷನ್ ೫೭ರ ಅನ್ವಯ ಮಂಡಲ ಪಂಚಾಯಿತಿ ಕೆಳಗಿನ ಸಾಮಾನ್ಯ ಕರ್ತವ್ಯಗಳನ್ನು ನಿರ್ವಹಿಸುತ್ತದೆ.

೧. ಗ್ರಾಮಗಳ ನೈರ್ಮಲ್ಯ ಮತ್ತು ಆರೋಗ್ಯಪಾಲನೆ.

೨. ಲೋಕಪಯೋಗಿ ಕಾಮಗಾರಿ ಮತ್ತು ಸೌಕರ್ಯ ಒದಗಿಸುವುದು.

೩. ಕೃಷಿ, ಪಶು ಸಂಗೋಪನೆ ಮತ್ತು ಅರಣ್ಯಗಳ ಅಭಿವೃದ್ಧಿ.

೪. ಸರ್ಕಾರದ ಭೂಸಾರ ಸಂರಕ್ಷಣೆ.

೫. ಪರಿಶಿಷ್ಟ ಜನಾಂಗಗಳ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ.

೬. ಸಹಕಾರ ಸಂಘಗಳ ಅಭಿವೃದ್ಧಿ.

೭. ನೈಸರ್ಗಿಕ ವಿಕೋಪ ಅಥವಾ ಅಭಾವ ಪರಿಸ್ಥಿತಿಯಲ್ಲಿ ನೆರವು ನೀಡುವುದು.

೮. ಗ್ರಾಮಗಳ ಗ್ರಂಥಾಲಯ ಮತ್ತು ವಾಚನಾಲಯಗಳನ್ನು ಸ್ಥಾಪಿಸುವುದು.

೯. ಗ್ರಾಮೀಣ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುವುದು.

೧೦. ಮಹಿಳೆಯರ ಮತ್ತು ಮಕ್ಕಳ ಕಲ್ಯಾಣವನ್ನು ರಕ್ಷಿಸುವುದು ಇತ್ಯಾದಿ.

ಸೆಕ್ಷನ್ ೬೦ ಪ್ರಕಾರ ಪ್ರತಿಯೊಂದು ಮಂಡಲ ಪಂಚಾಯಿತಿ ಮೂರು ಸಮಿತಿಗಳನ್ನು ಚುನಾವಣೆ ಮೂಲಕ ರಚಿಸಿ ಅವುಗಳ ಮೂಲಕ ತನ್ನ ಕರ್ತವ್ಯಗಳನ್ನು ನಿರ್ವಹಿಸಬಹುದು.

೧. ಉತ್ಪಾದನಾ ಸಮಿತಿ

೨. ಸಾಮಾಜಿಕ ನ್ಯಾಯ ಸಮಿತಿ

೩. ಸೌಕರ್ಯಗಳ ಸಮಿತಿ

ಕರ್ನಾಟಕದಲ್ಲಿ ಜಾರಿಗೆ ಬಂದಿರುವ ಹೊಸ ಜಿಲ್ಲಾ ಪಂಚಾಯಿತಿ ಕಾಯ್ದೆ ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಗೆ ಪೂರಕವಾಗಿದೆ. ಗ್ರಾಮೀಣ ಜನ ಜೀವನದಲ್ಲಿ ಕ್ರಾಂತಿಕಾರಿ ಬದಲಾವಣೆ ತರುವುದು ಮತ್ತು ಅವರ ಜೀವನವನ್ನು ಹೆಚ್ಚು ಅರ್ಥ ಪೂರ್ಣವಾಗುವಂತೆ ಮಾಡುವುದು ಜಿಲ್ಲಾಪರಿಷತ್ ಮತ್ತು ಮಂಡಲ ಪಂಚಾಯಿತಿಗಳ ಪ್ರಮುಖ ಗುರಿಯಾಗಿದೆ. ಆದರೆ ೧೯೮೭ರಲ್ಲಿಇದು ಅನುಷ್ಠಾನಕ್ಕೆ ಬಂದ ಮೇಲೆ ಅನೇಕ

ಸಮಸ್ಯೆಗಳಿಗೆ ಗುರಿಯಾಗಿದ. ಆದ್ದರಿಂದ ಇವುಗಳ ಸಭೆಗಳಲ್ಲಿ ಕೂಗಾಟ ಗದ್ದಲಗಳು ಹೆಚ್ಚಾಗಿದೆ. ಅಲ್ಲದ ಶಾಸಕರು, ಸಂಸತ್ತಿನ ಸದಸ್ಯರು ಮತ್ತು ಜಿಲ್ಲಾಪರಿಷತ್‌ಗಳ ಸದಸ್ಯರ ಕಾರ್ಯವ್ಯಾಪ್ತಿ ಮತ್ತು ಅಧಿಕಾರದ ವಿಷಯದಲ್ಲಿ ಜಿಜ್ಞಾಸೆ ತಲೆದೂಡಿದೆ. ಈ ಸ್ಥಳೀಯ ಸರ್ಕಾರಗಳು ದಕ್ಷತೆಯಿಂದ ಕೆಲಸ ಮಾಡಬಹುದೆಂದು ಆಶಿಸಬಹುದು.ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯಿತಿಗಳ ಮೌಲ್ಯಮಾಪನ ಸಮಿತಿ ೧೯೮೯ರ ತನ್ನ ವರದಿಯಲ್ಲಿ ಇವುಗಳ ಕಾರ್ಯನಿರ್ವಹಣೆಯ ಮೆಚ್ಚಿ ಇವುಗಳ ಸುಧಾರಣೆಗೆ ಕೆಲವು ಶಿಫಾರಸ್ಸುಗಳನ್ನು ಮಾಡಿತು.

ಒಂದು ಹಂತದಲ್ಲಿ ಕ್ರಾಂತಿಕಾರಿ ವ್ಯವಸ್ಥೆಯೆಂದೇ ಪ್ರಚಾರ ಮಾಡಲಾಗುತ್ತಿತ್ತು. ಆದರೆ ಇದು ಜನತೆಗೆ ಯಾವುದೇ ಅಧಿಕಾರ ನೀಡದ, ಮೇಲಿನಿಂದ ಹಳ್ಳಿಯವರೆಗೆ ಹರಡಿಕೊಂಡಿರುವ ಅಧಿಕಾರಿಶಾಹಿ ಆಡಳಿತಕ್ಕೋಸ್ಕರ ಮಾಡಿಕೊಂಡ ರಚನೆಯಾಗಿ ಮಾರ್ಪಾಡಾಯಿತು. ಬಲವಂತ ರಾಯ್ ಮೆಹತಾ ಸಮಿತಿ ಆಡಳಿತ ವಿಕೇಂದ್ರೀಕರಣದ ಕಲ್ಪನೆಯ ಪರವಾಗಿ ವಾದಿಸಿತ್ತು. ಆಡಳಿತ ವಿಕೇಂದ್ರೀಕರಣವು ಚುನಾಯಿತ ಪ್ರತಿ ನಿಧಿಗಳ ನಿಯಂತ್ರಣದಲ್ಲಿ ಸಹ ಇರಬೇಕೆಂಬದು ಈ ಸಮಿತಿಯ ಅಭಿಪ್ರಾಯವಾಗಿತ್ತು.

೧೯೭೭ರಲ್ಲಿ ಅಧಿಕಾರಕ್ಕೆ ಬಂದ ಮುರಾರ್ಜಿದೇಸಾಯಿ ನೇತೃತ್ವದ ಸರ್ಕಾರ ಪಂಚಾಯಿತಿ ಸಂಸ್ಥೆಗಳನ್ನು ಪರಾಮರ್ಶಿಸಲು ಅಶೋಕ ಮೆಹತಾ ಸಮಿತಿಯನ್ನು ನೇಮಿಸಲಾಯಿತು. ಪಂಚಾಯಿತ್ ರಾಜ್ ವ್ಯವಸ್ಥೆ ಸದಾ ನಿಂತ ನೀರಾಗಿತ್ತು. ಗ್ರಾಮೀಣಾಭಿವೃದ್ಧಿಯಲ್ಲಿ ಪಂಚಾಯತ್ ರಾಜ್ ವ್ಯವಸ್ಥೆಯು ಮಹತ್ವದ ಪಾತ್ರವನ್ನು ವಹಿಸುವುದನ್ನು ಅಧಿಕಾರಿವರ್ಗ ಯಾವಾಗಲೂ ಬೆಂಬಿಸಲಿಲ್ಲ. ಶಾಸಕಾಂಗವಾಗಲಿ, ಕಾರ್ಯಾಂಗವಾಗಲಿ ಪಂಚಾಯತ್ ರಾಜ್ ಗೆ ನಿರ್ಧಿಷ್ಟವಾದ ಸ್ಥಾನವನ್ನು ನೀಡಲಿಲ್ಲ. ಚುನಾವಣೆಗಳು ಕ್ರಮವಾಗಿ ನಡೆಯುತ್ತಿರಲಿಲ್ಲ. ದುರ್ಬಲವರ್ಗದವರಿಗೆ ಮತ್ತು ಮಹಿಳೆಯರಿಗೆ ಪ್ರಾತಿನಿಧ್ಯವಿರಲಿಲ್ಲ. ಅಗತ್ಯವಾದ ಅಧಿಕಾರ ಹಣದ ಸಂಪನ್ಮೂಲದ ಕೊರತೆ ಸದಾ ಕಂಡು ಬರುತ್ತಿತ್ತು.

೧೯೮೯ರಲ್ಲಿ ರಾಜೀವ್ ಗಾಂಧಿ ಸರ್ಕಾರ ಪಂಚಾಯತಿ ರಾಜ್‌ನ್ನು ಸಂವಿಧಾನದ ಚೌಕಟ್ಟಿನಲ್ಲಿ ಸೇರಿಸಲು ಪ್ರಯತ್ನಿಸಿದರು. ವಿರೋಧ ಪಕ್ಷಗಳ ಒತ್ತಡದಿಂದ ಈ ಮಸೂದೆಯು ಬಿದ್ದು ಹೋಯಿತು. ನ್ಯಾಷನಲ್ ಫ್ರಂಟ್‌ನ ವಿ.ಪಿ. ಸಿಂಗ್ ಸಹ ಈ ಮಸೂದೆಯನ್ನು ಮಂಡಿಸಲು ಪ್ರಯತ್ನಿಸಿದರೂ ಸರ್ಕಾರ ಮೊದಲೇ ಬಿದ್ದು ಹೋಯಿತು. ೧೯೯೩ ಡಿಸೆಂಬರ್ ನಲ್ಲಿ ಸಂವಿಧಾನದ ೭೩ನೇ ತಿದ್ದುಪಡಿಯ ಮೂಲಕ ಪಂಚಾಯತ್ ರಾಜ್ ಸಂವಿಧಾನದ ಸ್ವರೂಪವನ್ನು ಪಡೆದು ಕಾಯ್ದೆಯಾಗಿ ಮಾರ್ಪಟ್ಟಿತು.

೭೩ನೇ ಸಂವಿಧಾನದ ತಿದ್ದುಪಡಿಯ ಹಲವಾರು ಮಹತ್ವದ ಅಂಶಗಳನ್ನು ಒಳಗೊಂಡಿದೆ. ಈ ತಿದ್ದುಪಡಿಯ ಹಲವಾರು ರೀತಿಯ ಸಾಮಾಜಿಕ ಬದಲಾವಣೆಯ ನಾಂದಿಯನ್ನು ಹಾಡಿತು.

೧. ಗ್ರಾಮ ಸಭೆಗಳ ರಚನೆ.

೨. ಗ್ರಾಮ ಪಂಚಾಯಿತಿಗಳ ನೇರವಾದ ಚುನಾವಣೆ.

೩. ಜನ ಸಂಖ್ಯೆ ಆಧಾರದ ಮೇಲೆ ಅಧ್ಯಕ್ಷರ ಸ್ಥಾನ ಮೀಸಲು, ಹಿಂದುಳಿದವರಿಗೆ ಮೀಸಲಿಡಲಾಗಿದೆ.

೪. ೧/೩ ಭಾಗ ಶೇಕಡ (೩೩.೩೩) ಮಹಿಳೆಯರಿಗೆ ಮೀಸಲಾತಿ.

೫. ಅಧಿಕಾರ ಅವಧಿ ೫ ವರ್ಷ.

೬. ಕ್ರಮವಾದ ಚುನಾವಣೆ.

೭. ಅಭಿವೃದ್ಧಿ ಯೋಜನೆ.

೮. ಹಣಕಾಸಿನ ಮೂಲಗಳು.

೯. ಹಣಕಾಸು ಸಮಿತಿ ರಚನೆ.

೧೦. ಚುನಾವಣಾಧಿಕಾರಿಯ ಮೇಲ್ವಿಚಾರಣೆಯಲ್ಲಿ ಚುನಾವಣೆ.

ಪಂಚಾಯತ್ ರಾಜ್ ವ್ಯವಸ್ಥೆಯನ್ನು 'ಸ್ಥಳೀಯ ಆಡಳಿತ' 'ಸ್ವಯಂ ಆಡಳಿತವೆಂಬ' ಅರ್ಥದಲ್ಲಿ ಅರ್ಥೈಸಲಾಗಿದೆ. ಗ್ರಾಮೀಣ ಜನರ ಅಭಿವೃದ್ಧಿ ಹಾಗೂ ಜನರ ಆಶೋತ್ತರಗಳನ್ನು ಮೂರ್ತರೂಪಕ್ಕೆ ತರಲು ಗ್ರಾಮೀಣ ಜನರಿಗೆ ಅಧಿಕಾರ ನೀಡಲಾಗಿದೆ. 'ಜನರಿಗೆ ಅಧಿಕಾರ' ಎಂಬ ಪರಿಕಲ್ಪನೆಯನ್ನು ವಿಕೇಂದ್ರೀಕರಣದ ಪ್ರಕ್ರಿಯೆಯ ಮೂಲಕ ನಿಜವಾದ ಜನ ತಾಂತ್ರಿಯ ವ್ಯವಸ್ಥೆಯನ್ನು ಬಲಗೊಳಿಸುವುದು. ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳಲ್ಲಿ ಅಧಿಕಾರವನ್ನು ಕೇಂದ್ರೀಕರಿಸದೆ ಗ್ರಾಮ,ತಾಲ್ಲೂಕು, ಜಿಲ್ಲಾ ಮಟ್ಟದಲ್ಲಿ ವಿಕೇಂದ್ರೀಕರಣಗೊಳ್ಳುವುದರಿಂದ ಜನರ ಕೈಗೆ ನಿಜವಾದ ಅಧಿಕಾರ ನೀಡಲಾಗಿದೆಯೆಂದು ಹೇಳಲಾಗಿದೆ. ಇವೆಲ್ಲಾ ಘೋಷಿತ ಭರವಸೆಗಳು ಮಾತ್ರ. ೫೦ ರ ದಶಕದಿಂದ ೯೦ರ ದಶಕದವರೆಗೂ ಪಂಚಾಯತ್ ರಾಜ್ ವ್ಯವಸ್ಥೆಯ ಪರಿಕಲ್ಪನೆಯ ವ್ಯಾಖ್ಯಾನದಲ್ಲಿಕೆಲವು ಅಂಶಗಳು ಸ್ಪಷ್ಟವಾಗುತ್ತದೆ. ಇದು ಆಡಳಿತ ವಿಕೇಂದ್ರೀಕರಣದ ಅನುಕೂಲಕ್ಕಾಗಿ ಮಾಡಿಕೊಂಡ ಒಂದು ರಚನೆಯಾಗಿದೆ.

ಸರ್ಕಾರವು ನಿಯೋಜಿಸಿಕೊಂಡ ಯೋಜನೆಗಳನ್ನು ಗ್ರಾಮಮಟ್ಟದವರೆಗೂ ಅನುಷ್ಠಾನಕ್ಕೆ ತರುವ ಒಂದು ವ್ಯವಸ್ಥೆಯು ಸರ್ಕಾರಕ್ಕೆ ಅತ್ಯಗತ್ಯವಾಗಿದೆ. ಇದು ಇಂದು ಪಂಚಾಯತ್ ರಾಜ್ ವ್ಯವಸ್ಥೆಯಾಗಿದೆ. ಸಂವಿಧಾನದ

೭೩ನೇ ತಿದ್ದುಪಡಿಯ ೧೦ ಅಂಶಗಳನ್ನು ವಿಶ್ಲೇಷಿಸಿದರೂ ಪಂಚಾಯತ್ ರಾಜ್ ರಚನೆಗೆ ನೀಡಿರುವ ಪ್ರಾಮುಖ್ಯತೆಯನ್ನು , ಅವುಗಳನ್ನು ಅಧಿಕಾರಿಗಳಿಗೆ ನೀಡದೆ ಇರುವುದು ಸ್ಪಷ್ಟವಾಗಿ ಕಂಡು ಬರುತ್ತದೆ.

ಘೋಷಿತ ಉದ್ದೇಶಗಳಲ್ಲಿ ಇರುವ ವಿರುದ್ಧಗಳ ಜೊತೆಯಲ್ಲಿ ಅನುಷ್ಠಾನಕ್ಕೆ ತರುವ ಹಿನ್ನಲೆಯಲ್ಲಿ ಉಂಟಾಗುವ ವಿರುದ್ಧಗಳು ಪಂಚಾಯತ್ ರಾಜ್ ವೈಫಲ್ಯಕ್ಕೆ ಕಾರಣವಾಗಿವೆ. ಪಂಚಾಯತ್ ರಾಜ್ ವ್ಯವಸ್ಥೆ ಕಾರ್ಯ ನಿರ್ವಹಿಸುವ ವಿಧಾನ ರಾಜಕೀಯ ಪಕ್ಷಗಳು ಈ ವ್ಯವಸ್ಥೆಯನ್ನು ತಮ್ಮ ರಾಜಕೀಯದಾಟವಾಳವನ್ನಾಗಿ ಮಾಡಿಕೊಂಡಿರುವುದನ್ನು ನೋಡಬಹುದು. ನಮ್ಮ ದೇಶದಲ್ಲಿ ಭ್ರಷ್ಟಚಾರ, ಲಂಚ, ಅಧಿಕಾರ ಲಾಲಸೆ, ಜಾತಿ, ವರ್ಗ, ವೈಶಮ್ಯ ಮುಂತಾದವುಗಳನ್ನೊಳಗೊಂಡ ಜನ ತಂತ್ರದ ಒಂದು ಪ್ರತಿಫಲವಾಗಿ ಪಂಚಾಯತ್ ರಾಜ್ ಮಾರ್ಪಡುವ ಎಲ್ಲಾ ಸಾಧ್ಯತೆಗಳು ಇದೆ. ಇಂದು ಪಂಚಾಯತ್ ರಾಜ್ ಸರ್ಕಾರಿ ಯೋಜನೆಗಳನ್ನು ಜಾರಿಗೆ ತರುವ ಒಂದು ಆಡಳಿತ ವ್ಯವಸ್ಥೆಯಾಗಿ ಕಾರ್ಯ ನಿರ್ವಹಿಸುತ್ತಿದೆ.

# ಅಧ್ಯಾಯ ೩

## ಚುನಾಯಿತ ಮಹಿಳಾ ಮಾಹಿತಿದಾರರ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆ

ಯಾವುದೇ ಒಂದು ಕ್ಷೇತ್ರ ಕಾರ್ಯವನ್ನೊಳಗೊಂಡ ಅಧ್ಯಯನದಲ್ಲಿ ಆ ಕ್ಷೇತ್ರಕ್ಕೆ ಸಂಬಂಧಿಸಿದ ಜನರ ಹಿನ್ನೆಲೆಯನ್ನು ಅರಿಯುವುದು ತುಂಬಾ ಅವಶ್ಯ. ಏಕೆಂದರೆ ಪ್ರತಿಯೊಂದು ಸಮಾಜದಲ್ಲಿ ವಿಭಿನ್ನ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯುಳ್ಳ ಜನರಿರುತ್ತಾರೆ. ಇದರಿಂದಾಗಿ ಇವರು ವಿಭಿನ್ನ ರೀತಿಯ ಜೀವನ ಮಟ್ಟವನ್ನು ಹೊಂದಿರುತ್ತಾರೆ. ಹಾಗೆಯೇ ಅವರು ಸಮಾಜದಲ್ಲಿ ಆಗುವ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಬದಲಾವಣೆಗೆ ವಿಭಿನ್ನ ರೀತಿಯಲ್ಲಿ ಸ್ಪಂದಿಸುತ್ತಾರೆ. ಈ ಎಲ್ಲಾ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಅಧ್ಯಯನದ ಚುನಾಯಿತ ಮಹಿಳಾ ಮಾಹಿತಿದಾರರ ಸಾಮಾಜಿಕ ಆರ್ಥಿಕ ಹಿನ್ನೆಲೆಯನ್ನು ಕುರಿತು ಪರೀಕ್ಷಿಸುವ ಪ್ರಯತ್ನ ಮಾಡಲಾಗಿದೆ. ಆದ್ದರಿಂದ ಈ ಅಧ್ಯಾಯದಲ್ಲಿ ಮಾಹಿತಿದಾರರ ಸಾಕ್ಷರತೆ ಮಟ್ಟ , ವಯಸ್ಸು, ಉದ್ಯೋಗ, ವರಮಾನ, ಜಾತಿ, ಮಹಿಳಾ ಮಾಹಿತಿದಾರರ ಗಂಡಂದಿರ ಶಿಕ್ಷಣ, ಉದ್ಯೋಗ, ಆದಾಯ ಹಾಗೂ ಮಾಹಿತಿದಾರರ ಮಕ್ಕಳ ಶಿಕ್ಷಣ ಮೊದಲಾದ ಅಂಶಗಳ ಸಂಕ್ಷಿಪ್ತ ಮಾಹಿತಿಯನ್ನು ಕೊಡುವ ಪ್ರಯತ್ನ ಮಾಡಲಾಗಿದೆ.

**ಮಹಿಳೆಯರ ವಯೋ ರಚನೆ**

ಈ ಮೊದಲೇ ಹೇಳಿರುವಂತೆ ಈ ಅಧ್ಯಯನದಲ್ಲಿ ಮಹಿಳಾ ಮಾಹಿತಿದಾರರು ಬೇರೆ ಬೇರೆ ವಯೋ ಗುಂಪಿಗೆ ಸಂಬಂಧಪಟ್ಟವರಾಗಿದ್ದಾರೆ. ಅವರ ವಿಭಿನ್ನವಾದ ವಯಸ್ಸಿನ ಚಿತ್ರಣವನ್ನು ಕೋಷ್ಟಕ ೩.೧ರಲ್ಲಿ ತೋರಿಸಲಾಗಿದೆ.

**ಕೋಷ್ಟಕ ೩.೧**

**ಚುನಾಯಿತ ಮಹಿಳೆಯರ ವಯಸ್ಸಿನ ಮಟ್ಟ**

| ಕ್ರ.ಸಂಖ್ಯೆ. | ವಯಸ್ಸು | ಸಂಖ್ಯೆ | ಶೇಕಡ |
|---|---|---|---|
| ೦೧ | ೧೮ - ೨೫ | ೦೧ | ೧.೪೨ |
| ೦೨ | ೨೬ - ೩೫ | ೩೨ | ೪೫.೭೨ |
| ೦೩ | ೩೬ - ೪೫ | ೩೧ | ೪೪.೨೮ |
| ೦೪ | ೪೬ - ೫೫ | ೦೪ | ೫. ೭೨ |
| ೦೫ | ೫೬ ಕ್ಕಿಂತ ಹೆಚ್ಚು | ೦೨ | ೨.೮೬ |
| | ಒಟ್ಟು | ೭೦ | ೧೦೦.೦೦ |

ಈ ಕೋಷ್ಟಕದ ಪ್ರಕಾರ ಚುನಾಯಿತ ಮಹಿಳಾ ಪ್ರತಿನಿಧಿಗಳಲ್ಲಿ ಸುಮಾರು ಶೇಕಡ ೪೫ ರಷ್ಟು ಮಹಿಳೆಯರು ೨೬ ರಿಂದ ೩೫ ವಯಸ್ಸಿನ ವಯೋ-ಗುಂಪಿನಲ್ಲಿದ್ದಾರೆ. ಇದೇ ಶೇಕಡಾಂಶವನ್ನು ಹೊಂದಿದ ಮಹಿಳೆಯರು ೩೬ ರಿಂದ ೪೫ ವಯಸ್ಸಿನ ವಯೋ-ಗುಂಪಿನಲ್ಲಿದ್ದಾರೆ. ಈ ವಯೋ-ಗುಂಪಿನವರು ರಾಜಕೀಯ ಕ್ಷೇತ್ರದಲ್ಲಿ ಹೆಚ್ಚಾಗಿ ಭಾಗವಹಿಸಿದ್ದಾರ. ಇಂಥಹ ಮಹಿಳೆಯರ ಪ್ರವೇಶಕ್ಕೆ ಗಂಡಂದಿರ ಮತ್ತು ಕುಟುಂಬದ ಸದಸ್ಯರ ಬೆಂಬಲ ಇರುವುದು ಸ್ಪಷ್ಟವಾಗಿ ಕಂಡು ಬಂದಿದೆ. ೧೮ ರಿಂದ ೨೫ ವಯೋ-ಗುಂಪಿನವರು ರಾಜಕೀಯದಲ್ಲಿ ಭಾಗವಹಿಸುವಿಕೆ ಬಹಳ ಕಡಿಮೆ. ಶೇಕಡ ೬.೦ರಷ್ಟು ಮಹಿಳೆಯರು ೪೬ ರಿಂದ ೫೫ ವರ್ಷದ ವಯೋಮಿತಿ ವಯಸ್ಸಿನಲ್ಲಿ ಇರುವವರು. ಇಂಥವರು ಸಹ ರಾಜಕೀಯಕ್ಕಿಳಿಯಲು ಹಿಂಜರಿಯುತ್ತಾರ. ಉಳಿದವರು ಶೇಕಡ ೨ ರಷ್ಟು ೫೫ಕ್ಕಿಂತ ಹೆಚ್ಚು ವಯಸ್ಸಿನವರು. ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಗೆ ಮೀಸಲಾತಿ ಬಂದಾಗ, ವಯಸ್ಸಾದ ಮಹಿಳೆಯನ್ನು ಅವಿರೋಧವಾಗಿ ಆಯ್ಕೆ ಮಾಡಿರುವುದು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಇಂತಹ ಮಹಿಳೆಯರ ನಾಮಪತ್ರ ನೇಮಕ ಮಾಡಿರುತ್ತಾರೆ. ಇವರ ಪರವಾಗಿ ಪಂಚಾಯಿತಿ ಸದಸ್ಯರು ಆಡಳಿತವನ್ನು ನಡೆಸಿಕೊಂಡು ಹೋಗುತ್ತಿರುವುದು ಕಂಡುಬಂದಿದೆ.

ಈ ಅಂಕಿ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ೨೬ ರಿಂದ ೪೫ರ ವಯೋ-ಗುಂಪಿನ ಮಹಿಳೆಯರು ಪಂಚಾಯತ್‌ರಾಜ್ ಸಂಸ್ಥೆಗಳಲ್ಲಿ ಹೆಚ್ಚಾಗಿ ಚುನಾಯಿತರಾಗಿರುವುದು ತಿಳಿಯುತ್ತದೆ. ನಮ್ಮ ನಮೂನೆಯಲ್ಲಿರುವ ಒಟ್ಟು ೭೦ ಚುನಾಯಿತ ಮಹಿಳಾ ಸದಸ್ಯರಲ್ಲಿ ೬೩ ಮಹಿಳೆಯರು (ಶೇಕಡ ೯೦) ೨೬ ರಿಂದ ೪೫ರ ವಯೋ ಗುಂಪಿನವರಾಗಿದ್ದಾರೆ. ಕೋಷ್ಟಕದಲ್ಲಿ ತೋರಿಸಿರುವಂತೆ ೧೮ ರಿಂದ ೨೫ರ ವಯೋ ಗುಂಪಿನಲ್ಲಿರುವ ಚುನಾಯಿತ ಯುವತಿಯರ ಪ್ರಮಾಣ (ಶೇ ೧.೪೨) ಮತ್ತು ೪೫ಕ್ಕೆ ಮೇಲ್ಪಟ್ಟ ವಯೋ ಗುಂಪಿನವರ ಪ್ರಮಾಣವು ಸಹ ಕಡಿಮೆ (ಶೇ. ೮.೫೮) ನಮ್ಮ ಅಧ್ಯಯನದಲ್ಲಿ ಕಂಡು ಬಂದ ಸಂಗತಿಯೇನೆಂದರೆ ಹೆತ್ತವರು ವಿವಾಹವಾಗದ ಹೆಣ್ಣು ಮಕ್ಕಳನ್ನು ಚುನಾವಣೆಯಲ್ಲಿ ಭಾಗವಹಿಸಲು ಬಿಡುವುದಿಲ್ಲ ಹಾಗೂ ೪೫ರ ನಂತರದ ಮಹಿಳೆಯರಿಗೆ ಹೆಚ್ಚಿನ ಜವಾಬ್ದಾರಿಯಿರುವುದರಿಂದ ಅವರಿಗೆ ರಾಜಕೀಯದಲ್ಲಿ ಆಸಕ್ತಿಯಿರುವುದಿಲ್ಲ. ಇದರಿಂದಾಗಿ ಪಂಚಾಯತ್ ರಾಜ್ ಸಂಸ್ಥೆಗಳ ಚುನಾಯಿತ ಮಹಿಳೆಯರಲ್ಲಿ ಶೇಕಡ ೯೦ರಷ್ಟು ವಿವಾಹಿತ ಮಧ್ಯ ವಯಸ್ಕರಾಗಿದ್ದಾರೆ.

**ಮಹಿಳೆಯರ ಶೈಕ್ಷಣಿಕ ಮಟ್ಟ**

ಆಡಳಿತದಲ್ಲಿ ಶಿಕ್ಷಣವು ಪ್ರಮುಖ ಪಾತ್ರವಹಿಸುತ್ತದೆ. ಚುನಾಯಿತ ಮಹಿಳೆಯರಿಗೆ ಶಿಕ್ಷಣದ ಅವಶ್ಯಕತೆ ಬಹಳ ಮುಖ್ಯ. ಶಿಕ್ಷಣವು ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಪ್ರಭಾವ ಬೀರುವ ಅಂಶವಾಗಿದೆ. ದೇಶದ ಅಭಿವೃದ್ಧಿ ಯೋಜನೆಗಳು, ಮಹಿಳೆಯರಿಗಾಗಿಯೇ ಇರುವ ಕಾರ್ಯಕ್ರಮಗಳ ಅನುಷ್ಠಾನ, ಮೀಸಲಾತಿ, ಮಹಿಳೆಯರ ರಾಜಕೀಯ ಪಾಲ್ಗುಗೊಳ್ಳುವಿಕೆ ಮುಂತಾದವು ಯಶಸ್ವಿಯಾಗುವಲ್ಲಿ ಶಿಕ್ಷಣವು ಪ್ರಮುಖ ಅಸ್ತ್ರವಾಗಿದೆ. ಈ ಹಿನ್ನೆಲೆಯನ್ನು ಇಟ್ಟುಕೊಂಡು ಕೋಷ್ಟಕ ೩. ೨ ರಲ್ಲಿ ಚುನಾಯಿತ ಮಹಿಳಾ ಮಾಹಿತಿದಾರರ ಶೈಕ್ಷಣಿಕ ಮಟ್ಟದ ವಿವರಣೆ ನೀಡಲಾಗಿದೆ.

ಕೋಷ್ಟಕ ೩.೨
ಚುನಾಯಿತ ಮಹಿಳೆಯರ ಶೈಕ್ಷಣಿಕ ಮಟ್ಟ.

| ಕ್ರಮ.ಸಂಖ್ಯೆ | ಶಿಕ್ಷಣ | ಸಂಖ್ಯೆ | ಶೇಕಡ |
|---|---|---|---|
| ೦೧ | ಅನಕ್ಷರಸ್ಥರು | ೪೧ | ೫೮.೫೮ |
| ೦೨ | ಪ್ರಾಥಮಿಕ (೧ ರಿಂದ ೭) | ೨೭ | ೩೮.೫೭ |
| ೦೩ | ಪ್ರೌಢ | ೦೨ | ೨.೮೫ |
| ೦೪ | ಪದವಿ ಪೂರ್ವ | - | - |
| ೦೫ | ಪದವಿ | - | - |
| | ಒಟ್ಟು | ೭೦ | ೧೦೦.೦೦ |

ಕೋಷ್ಟಕ ೩.೨ ರಲ್ಲಿ ತಿಳಿಸಿರುವಂತೆ ಪ್ರಸ್ತುತ ಅಧ್ಯಯನದಲ್ಲಿ ಶೇಕಡ ೫೦ಕ್ಕೂ ಅಧಿಕ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ಇಂಥವರ ಪ್ರವೇಶ ಮಹಿಳಾ ವರ್ಗಕ್ಕೆ ಬಹಳ ಮಟ್ಟಿನ ಪ್ರಯೋಜನವಾಗಲಾರದು. ಈ ಅನಕ್ಷರಸ್ಥ ಮಹಿಳೆಯರು ಸುತ್ತೋಲೆ, ಪಂಚಾಯಿತಿ ಪ್ರಕಟಣೆ; ಮುಂತಾದವುಗಳನ್ನು ಓದಿ ಅರ್ಥಮಾಡಿಕೊಳ್ಳಲು ಅಸಮರ್ಥರಾಗಿರುತ್ತಾರೆ. ಆದರೆ ಇಂತಹ ಮಹಿಳೆಯರಿಗೆ ಸ್ವಲ್ಪಮಟ್ಟದ ರಾಜಕೀಯ ಅರಿವು ಇರುವುದು ಗಮನಾರ್ಹವಾಗಿದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಗ್ರಾಮ ಪಂಚಾಯಿತಿಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥ ಮಹಿಳೆಯರು ಚುನಾಯಿತರಾಗಿದ್ದಾರೆ. ಇಂಥ ಅನಕ್ಷರಸ್ಥ ಮಹಿಳೆಯರಿಂದ ಆಡಳಿತವು ನಿರೀಕ್ಷಿತ ಮಟ್ಟದಲ್ಲಿ ನಡೆಯಲಾರದು. ಚರ್ಚೆಗಳಲ್ಲಿ ಹೆಚ್ಚು ಮಹಿಳೆಯರು ಭಾಗವಹಿಸುವುದಿಲ್ಲ. ಶಿಕ್ಷಣದಿಂದ ವಂಚಿತರಾದ ಚುನಾಯಿತ ಮಹಿಳೆಯರು ಪರಿಣಾಮಕಾರಿ ನಿರ್ಣಯಗಳನ್ನು ತೆಗೆದುಕೊಳ್ಳಲು ಹಲವು ಬಾರಿ ಅಸಮರ್ಥವಾಗಲೂಬಹುದು.

ನಮ್ಮ ಅಧ್ಯಯನದ ಶೇಕಡ ೩೮ರಷ್ಟು ಮಹಿಳೆಯರು ಪ್ರಾಥಮಿಕ ಶಿಕ್ಷಣವನ್ನು ಪಡೆದಿದ್ದಾರೆ. ಇವರಿಗೆ ಸುತ್ತೋಲೆ, ಪ್ರಕಟಣೆಗಳನ್ನು ಓದಲು ಬರುತ್ತದೆ. ಇವರುಗಳು ಪಂಚಾಯಿತಿಯ ಸಭೆಗಳಲ್ಲಿ, ಚರ್ಚೆಗಳಲ್ಲಿ ಮುಕ್ತವಾಗಿ ಭಾಗವಹಿಸುತ್ತಾರೆ. ಇಂಥಹ ಸದಸ್ಯರಿಂದ ಪಂಚಾಯಿತಿಯ ಕಾರ್ಯ ಕ್ಷಮತೆಯು ಉತ್ತಮಗೊಳ್ಳುವ ಸಾಧ್ಯತೆ ಇದೆ. ಶೇಕಡ ೨ರಷ್ಟು ಪ್ರೌಢ ಶಿಕ್ಷಣ ಪಡೆದ ಮಹಿಳೆಯರು ಆಯ್ಕೆಯಾಗಿದ್ದಾರೆ.

ಕೋಷ್ಟಕ ೩.೩.

**ಮಹಿಳಾ ಅಧ್ಯಕ್ಷರ ಶಿಕ್ಷಣ ಮಟ್ಟ**

| ಕ್ರ.ಸಂ. | ಶಿಕ್ಷಣ | ಮಹಿಳೆಯರು | ಪುರುಷರು | ಒಟ್ಟು ಶೇಕಡ |
|---|---|---|---|---|
| ೦೧ | ಅನಕ್ಷರಸ್ಥರು | ೩ (೨೫) | ೧ (೮.೩೩) | ೪ (೩೩.೩೩) |
| ೦೨ | ಪ್ರಾಥಮಿಕ (೧ ರಿಂದ ೭) | ೨ (೧೬.೬೬) | ೧ (೮.೩೩) | ೩ (೨೫.೦೦) |
| ೦೩ | ಪ್ರೌಢ | ೧ (೮.೩೪) | ೨ (೧೬.೬೬) | ೩ (೨೫.೦೦) |
| ೦೪ | ಪದವಿ ಪೂರ್ವ | ೦ ( -) | ೦ ( -) | ೦ ( -) |
| ೦೫ | ಪದವಿ | ೦ (-) | ೧ (೮.೩೪) | ೧ (೮.೩೪) |
| ೦೬ | ಇತರೆ | ೦ (-) | ೧ (೮.೩೪) | ೧ (೮.೩೪) |
| | ಒಟ್ಟು | ೬ (೫೦.೦೦) | ೬ (೫೦.೦೦) | ೧೨ (೧೦೦.೦೦) |

ಮಹಿಳಾ ಸದಸ್ಯರಿಗಿಂತಲೂ ಹೆಚ್ಚಾಗಿ ಮಹಿಳಾ, ಅಧ್ಯಕ್ಷರು ವಿದ್ಯಾವಂತರಾಗಿದ್ದರೆ, ಗ್ರಾಮ ಪಂಚಾಯಿತಿ ಕಾರ್ಯ ಹೆಚ್ಚಿನ ಮಟ್ಟಿಗೆ ಸುಸೂತ್ರದಲ್ಲಿ ನಡೆಯಬಹುದು. ಆದರೆ ಕೋಷ್ಟಕ ೩.೩ರ ಪ್ರಕಾರ ಪ್ರಸ್ತುತ ಅಧ್ಯಯನದ ನಮೂನೆಯಲ್ಲಿನ ಆರು ಮಹಿಳಾಧ್ಯಕ್ಷರಲ್ಲಿ ಮೂವರು ಅನಕ್ಷರಸ್ಥರಾಗಿದ್ದಾರೆ. ಉಳಿದ ಮೂವರಲ್ಲಿ ಇಬ್ಬರು ಪ್ರಾಥಮಿಕ, ಒಬ್ಬರು ಪ್ರೌಢ ಶಿಕ್ಷಣ ಪಡೆದವರಾಗಿದ್ದಾರೆ. ಅನಕ್ಷರಸ್ಥ ಅಧ್ಯಕ್ಷಿಣಿಯರು ಅನೇಕ ಸಂದರ್ಭಗಳಲ್ಲಿ ಪುರುಷ ಸದಸ್ಯರ ಕೈಗೊಂಡಿಯಾಗಿ ಪಂಚಾಯಿತಿಯ ಕಾರ್ಯನಿರ್ವಹಿಸುವ ಪರಿಸ್ಥಿತಿಯನ್ನು ನಾವು ಈ ಅಧ್ಯಯನದಲ್ಲಿ ಕಂಡುಕೊಂಡಿದ್ದೇವೆ. ನೀತಿ ಉದಾತ್ತಗಳನ್ನು ತೆಗೆದುಕೊಳ್ಳವಲ್ಲಿ ಮಹಿಳೆಯರು ಕ್ರಿಯಾಶೀಲವಾಗಿ ಭಾಗವಹಿಸುತ್ತಿಲ್ಲ. ಏಕೆಂದರೆ ಅವರು ಅನಕ್ಷರಸ್ಥರಾಗಿದ್ದರಿಂದ ಅವರಿಗೆ ರಾಜಕೀಯ ತಿಳುವಳಿಕೆ ಕಡಿಮೆ ಇರುತ್ತದೆ. ಪ್ರತಿಯೊಂದು ಸಭೆಗಳಲ್ಲಿ ಇವರು ಅಧ್ಯಕ್ಷತೆಯನ್ನು ವಹಿಸಿ, ಊರಿನ ಸಮಸ್ಯೆಗಳ ಬಗ್ಗೆ ಚರ್ಚೆ ಮಾಡಬೇಕು. ಆದರೆ ಸಭೆಗಳಲ್ಲಿ ನಾಮಮಾತ್ರವಾಗಿ ಅಧ್ಯಕ್ಷತೆಯನ್ನು ವಹಿಸಿಕೊಳ್ಳುವುದು ನಮ್ಮ ಅಧ್ಯಯನದಿಂದ ಕಂಡು ಬಂದಿದೆ. ಅನಕ್ಷರಸ್ಥ ಅಧ್ಯಕ್ಷಿಣಿಯರಿದ್ದರೆ ಈ ಎಲ್ಲಾ ಸಮಸ್ಯೆಗಳು ಎದುರಿಸಬೇಕಾಗುತ್ತದೆ.

ನಮ್ಮ ನಮೂನೆಯಲ್ಲಿನ ಇಬ್ಬರು ಮಹಿಳಾಧ್ಯಕ್ಷರಲ್ಲಿ ಒಬ್ಬರು ಪ್ರಾಥಮಿಕ ಮತ್ತು ಇನ್ನೊಬ್ಬರು ಪ್ರೌಢಶಿಕ್ಷಣವನ್ನು ಮುಗಿಸಿದ್ದಾರೆ. ಇವರು ಸ್ವಲ್ಪ ಮಟ್ಟಿಗೆ ಆಡಳಿತದ ಸೂಕ್ಷ್ಮಗಳನ್ನು ಓದಿಯಾದರೂ ತಿಳಿದುಕೊಳ್ಳಬಲ್ಲರು.

**ಚುನಾಯಿತ ಮಹಿಳೆಯರ ಜಾತಿವಾರು ವಿಂಗಡನೆ**

ನಮ್ಮ ದೇಶದ ಸಾಮಾಜಿಕ ಜೀವನದಲ್ಲಿ ಜಾತಿ ಪದ್ಧತಿಯು ಮಹತ್ವದ ಪಾತ್ರವಹಿಸುತ್ತದೆ. ಜಾತಿಯು ಒಂದಲ್ಲ ಒಂದು ರೀತಿಯಲ್ಲಿ ಮನುಷ್ಯನನ್ನು ಪ್ರಭಾವಿಸುತ್ತದೆ. ಆದ್ದರಿಂದ ಜಾತಿ ಆಧಾರಿತವಾಗಿ ಅಧ್ಯಯನದ ಕ್ಷೇತ್ರವನ್ನು ಅಭ್ಯಸಿಸುವುದು ಅಗತ್ಯ. ಈ ಹಿನ್ನೆಲೆಯನ್ನಿಟ್ಟುಕೊಂಡು ಪ್ರಸ್ತುತ ಅಧ್ಯಯನದ ಚುನಾಯಿತ ಮಹಿಳಾ ಮಾಹಿತಿದಾರರನ್ನು ಜಾತಿ ಆಧಾರಿತವಾಗಿ ಕೋಷ್ಟಕ ೩.೪ ರಲ್ಲಿ ನೀಡಲಾಗಿದೆ.

ಕೋಷ್ಟಕ ೩.೪

**ಚುನಾಯಿತ ಮಾಹಿತಿದಾರರ ಜಾತಿವಾರು ವಿಂಗಡನೆ**

| ಕ್ರಮ.ಸಂಖ್ಯೆ | ಜಾತಿ/ವರ್ಗ | ಸಂಖ್ಯೆ | ಶೇಕಡ |
|---|---|---|---|
| ೦೧ | ಪರಿಶಿಷ್ಟ ಜಾತಿ | ೧೫ | ೨೧.೪೨ |
| ೦೨ | ಪರಿಶಿಷ್ಟ ಪಂಗಡ | ೧೩ | ೧೮. ೫೮ |
| ೦೩ | ಹಿಂದುಳಿದ ವರ್ಗ | ೨೭ | ೩೮.೫೮ |
| ೦೪ | ಸಾಮಾನ್ಯ ವರ್ಗ | ೧೫ | ೨೧.೪೨ |
| | ಒಟ್ಟು | ೭೦ | ೧೦೦.೦೦ |

ಕೋಷ್ಟಕ ೩.೪ ರಲ್ಲಿ ತಿಳಿಸಿರುವಂತೆ ಹೆಚ್ಚು ಸಂಖ್ಯೆಯ ಆಯ್ದು ಮಹಿಳೆಯರು ಅಂದರೆ ಶೇಕಡ ೩೯ರಷ್ಟು ಮಹಿಳೆಯರು ಹಿಂದುಳಿದ ವರ್ಗಕ್ಕೆ ಸೇರಿದವರು. ಪರಿಶಿಷ್ಟ ಜಾತಿಗೆ ಸೇರಿದ ಮಹಿಳೆಯರು ಶೇಕಡ ೨೧ರಷ್ಟು. ಪರಿಶಿಷ್ಟ ಪಂಗಡದ ಶೇಕಡ ೧೮ರಷ್ಟು, ಸಾಮಾನ್ಯ ವರ್ಗಕ್ಕೆ ಸೇರಿದ ಶೇಕಡ ೨೨ರಷ್ಟು ಸೇರಿದ ಮಹಿಳೆಯರು ಆಯ್ಕೆಯಾಗಿದ್ದಾರೆ. ಮೀಸಲಾತಿಗೆ ಅನುಗುಣವಾಗಿ ನಮ್ಮ ಅಧ್ಯಯನ ಕ್ಷೇತ್ರದಲ್ಲಿಮಹಿಳೆಯರು ಆಯ್ಕೆಯಾಗಿದ್ದಾರೆ.

**ಚುನಾಯಿತ ಮಹಿಳೆಯರ ಆದಾಯದ ಮಟ್ಟ**

ರಾಜಕೀಯದಲ್ಲಿ ಆರ್ಥಿಕಮಟ್ಟವು ಪ್ರಮುಖ ಪಾತ್ರವಹಿಸುತ್ತದೆ. ಶ್ರೀಮಂತರಾದವರು ಹಣದ ಬಲದಿಂದ ಚುನಾವಣೆಗೆ ಸ್ಪರ್ಧಿಸಿ ಗೆಲ್ಲಬಹುದು. ಆದರೆ ಕೆಳವರ್ಗದವರು ರಾಜಕೀಯದಲ್ಲಿ ಭಾಗವಹಿಸುವುದು ಕಷ್ಟಕರವಾಗಿದೆ. ಆದರೆ ಗ್ರಾಮೀಣಮಟ್ಟದ ರಾಜಕೀಯ ವ್ಯವಸ್ಥೆಯಲ್ಲಿ ಹೆಚ್ಚಾಗಿ ಮಧ್ಯಮ ವರ್ಗದ ಕುಟುಂಬಗಳು ಭಾಗವಹಿಸುವುದಿಲ್ಲ. ಕೆಳವರ್ಗದ ಕುಟುಂಬಗಳಿಗೆ ಸೇರಿದವರು ಹೆಚ್ಚು ಗ್ರಾಮೀಣ

ರಾಜಕೀಯದಲ್ಲಿ ಭಾಗವಹಿಸುತ್ತಾರೆ. ಆದುದರಿಂದ ನಾವು ಆಯ್ದುಕೊಂಡ ಮಹಿಳೆಯರ ಆದಾಯದ ಮಟ್ಟ ಯಾವ ರೀತಿ ಇದೆ ಎನ್ನುವುದನ್ನರಿಯುವುದು ಸೂಕ್ತವಾಗಿದೆ. ಇದನ್ನು ಕುರಿತ ವಿವರವನ್ನು ಕೋಷ್ಟಕ ೩.೫ ರಲ್ಲಿ ನೀಡಲಾಗಿದೆ.

ಕೋಷ್ಟಕ ೩.೫

ಚುನಾಯಿತ ಮಹಿಳಾ ಮಾಹಿತಿದಾರರ ಆದಾಯದ ಮಟ್ಟ.

| ಕ್ರಮ.ಸಂಖ್ಯೆ | ಆದಾಯ | ಸಂಖ್ಯೆ | ಶೇಕಡ |
|---|---|---|---|
| ೦೧ | ೩೫೦೦-೮೦೦೦ | ೪೬ | ೬೫.೭೧ |
| ೦೨ | ೮೦೦೧-೧೫೦೦೦ | ೨೧ | ೩೦.೦೦ |
| ೦೩ | ೧೫೦೦೧-೨೫೦೦೦ | - | - |
| ೦೪ | ೨೫೦೦೧-೩೫೦೦೦ | - | - |
| ೦೫ | ೩೫೦೦೦ ಕ್ಕಿಂತ ಹೆಚ್ಚು | ೦೩ | ೪.೨೯ |
| | ಒಟ್ಟು | ೭೦ | ೧೦೦.೦೦ |

ನಮ್ಮ ಅಧ್ಯಯನ ಕ್ಷೇತ್ರದ ಚುನಾಯಿತ ಮಹಿಳೆಯರು ಹೆಚ್ಚಾಗಿ ಕನಿಷ್ಟ ಆದಾಯವನ್ನು ಹೊಂದಿದವರು. ಚುನಾಯಿತ ಮಹಿಳಾ ಮಾಹಿತಿದಾರರ ಶೇಕಡ ೬೬ರಷ್ಟು ಮಹಿಳೆಯರು ೩೫೦೦ ರಿಂದ ೮೦೦೧ ರೂ. ಗಳ ಒಳಗಿರುವ ಆದಾಯದವರು. ಇದರಿಂದಾಗಿ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗಿ ಬಡವರ ಸಂಖ್ಯೆ ಇರುವುದನ್ನು ಕಾಣಬಹುದು (ವಿವರಗಳಿಗೆ ಕೋಷ್ಟಕ ೩.೫ ನೋಡಿ). ೮೦೦೧ ರಿಂದ ೧೫೦೦೦ ರೂ. ಆದಾಯ ಇರುವವರು ಕಡಿಮೆ ಪ್ರಮಾಣದಲ್ಲಿ ಅಂದರೆ ಶೇಕಡ ೩೦ರಷ್ಟು ಮಾತ್ರ ಭಾಗವಹಿಸಿದ್ದಾರೆ. ಈ ಆದಾಯ ಮಟ್ಟದ ಜನರಲ್ಲಿ ರಾಜಕೀಯ ಆಸಕ್ತಿ ಕಡಿಮೆ ಇರುವುದನ್ನು ಗುರುತಿಸಲಾಗಿದೆ.

**ಚುನಾಯಿತ ಮಹಿಳೆಯರ ವೈವಾಹಿಕ ಜೀವನ**

ವಿವಾಹವು ಪ್ರಮುಖವಾದ ಸಾಮಾಜಿಕ ಪದ್ಧತಿಯಾಗಿದೆ. ಭಾರತದಲ್ಲಿ ವಿವಾಹವು ಒಂದು ಸಂಪ್ರದಾಯವಾಗಿದ್ದು ಪ್ರತಿಯೊಬ್ಬರಿಗೂ ಕಡ್ಡಾಯವಾಗಿದೆ. ಭಾರತದಲ್ಲಿ ವಿವಾಹವು ಒಂದು ಸಂಪ್ರದಾಯವಾಗಿದ್ದು ಪ್ರತಿಯೊಬ್ಬರಿಗೂ ಕಡ್ಡಾಯವಾಗಿದೆ. ಈ ದಿಸೆಯಲ್ಲಿ ಚುನಾಯಿತ ಮಹಿಳೆಯರ ವೈವಾಹಿಕ ಜೀವನದ ಕುರಿತು ವಿಶ್ಲೇಷಿಸುವುದು ಅಗತ್ಯ. ಈ ಅಧ್ಯಯನದ ಮಹಿಳೆಯರ ವೈವಾಹಿಕ ಜೀವನ ಕುರಿತ ಮಾಹಿತಿಯನ್ನು ಕೋಷ್ಟಕ ೩.೬ರಲ್ಲಿ ನೀಡಲಾಗಿದೆ.

**ಕೋಷ್ಟಕ. ೩.೬**

**ಚುನಾಯಿತ ಮಹಿಳಾ ಮಾಹಿತಿದಾರರ ವೈವಾಹಿಕ ಜೀವನದ ಸ್ಥಾನಮಾನ.**

| ಕ್ರ.ಸಂಖ್ಯೆ | ಮಹಿಳೆಯರು | ಸಂಖ್ಯೆ | ಶೇಕಡ |
|---|---|---|---|
| ೦೧ | ಅವಿವಾಹಿತರು | ಯಾರೂ ಇಲ್ಲ | ಯಾರೂ ಇಲ್ಲ |
| ೦೨ | ವಿವಾಹಿತರು | ೬೨ | ೮೮.೫೭ |
| ೦೩ | ವಿಧವೆಯರು | ೦೨ | ೨.೮೫ |
| ೦೪ | ದೇವದಾಸಿಯರು | ೦೬ | ೮.೫೮ |
| | ಒಟ್ಟು | ೭೦ | ೧೦೦.೦೦ |

ಕೋಷ್ಟಕ ೩. ೬ರ ಅಂಕಿ ಅಂಶಗಳನ್ನು ಗಮನಿಸಿದಾಗ ನಮ್ಮ ಅಧ್ಯಯನದಲ್ಲಿ ಅವಿವಾಹಿತ ಮಹಿಳೆಯರು ಯಾರೂ ಇಲ್ಲ. ವಿವಾಹಿತರು ಶೇಕಡ ೮೮ ರಷ್ಟು ಇದ್ದಾರೆ. ಉಳಿದ ಮಾಹಿತಿದಾರರಲ್ಲಿ ವಿಧವೆಯರು ಶೇಕಡ ೩ರಷ್ಟು, ದೇವದಾಸಿಯರು ಶೇಕಡ ೯ ರಷ್ಟು ಇದ್ದಾರೆ. ಈ ಕೋಷ್ಟಕದಿಂದ ನಾವು ಸಮಾಜದಲ್ಲಿ ವಿವಾಹಿತ ಮಹಿಳೆಗೆ ಹೆಚ್ಚು ಪ್ರೋತ್ಸಾಹ ಇರುವುದನ್ನು ಗುರುತಿಸಬಹುದು. ಚುನಾಯಿತ ಮಹಿಳೆಗೆ ಕುಟುಂಬದ ಸದಸ್ಯರಿಗಿಂತ ಅವರ ಗಂಡಂದಿರ ಪ್ರೋತ್ಸಾಹ ಬಹಳ ಮುಖ್ಯ. ಹೆಚ್ಚು ದೇವದಾಸಿಯರನ್ನು ನಾವು ಸಾಮನ್ಯವಾಗಿ ಕೆಳವರ್ಗದಲ್ಲಿ ಕಾಣುತ್ತೇವೆ. ಇಂಥಹ ಮಹಿಳೆಯರು ಮೀಸಲಾತಿಯ ಮೂಲಕ ಹೆಚ್ಚಾಗಿ ಅವಿರೋಧವಾಗಿ ಆಯ್ಕೆಯಾಗಿದ್ದಾರೆ.

**ಚುನಾಯಿತ ಮಹಿಳೆಯರ ಗಂಡಂದಿರ ಶಿಕ್ಷಣಮಟ್ಟ**

ಮಹಿಳೆಗೆ ಸಂಬಂಧಿಸಿದ ಮೀಸಲಾತಿಗಳು ಫಲಕಾರಿಯಾಗಬೇಕಾದರೆ, ಚುನಾಯಿತ ಮಹಿಳೆಯರ ಗಂಡಂದಿರ ಶಿಕ್ಷಣವು ಅತ್ಯಂತ ಪ್ರಭಾವ ಬೀರುವ ಅಂಶವಾಗಿದೆ. ಅವರ ಗಂಡಂದಿರು ಶಿಕ್ಷಣವಂತರಾಗಿದ್ದರೆ ಚುನಾಯಿತ ಮಹಿಳೆಯರಿಗೆ ಸ್ವಲ್ಪ ಮಟ್ಟಿನ ಪ್ರಯೋಜನವಾಗಬಹುದು.

ಈ ನಿಟ್ಟಿನಲ್ಲಿ ಹಗರಿಬೊಮ್ಮನಹಳ್ಳಿ ಪಂಚಾಯತ್ ರಾಜ್ ವ್ಯವಸ್ಥೆಯ ಗ್ರಾಮ ಪಂಚಾಯಿತಿಯ ಮಹಿಳಾ ಸದಸ್ಯರ ಗಂಡಂದಿರ ಶಿಕ್ಷಣಮಟ್ಟ ನೋಡಲು ಪ್ರಯತ್ನಿಸಲಾಗಿದೆ. ಈ ಕುರಿತಾದ ಮಾಹಿತಿಯನ್ನು ಕೋಷ್ಟಕ ೩. ೭ರಲ್ಲಿ ನೀಡಲಾಗಿದೆ.

ಕೋಷ್ಟಕ ೩. ೭

ಚುನಾಯಿತ ಮಹಿಳಾ ಮಾಹಿತಿದಾರ ಮತ್ತು ಅವರ ಗಂಡಂದಿರ ಶಿಕ್ಷಣಮಟ್ಟ

| ಕ್ರ.ಸಂ. | ಮಹಿಳೆಯರ ಶಿಕ್ಷಣ | ಗಂಡಂದಿರ ಶಿಕ್ಷಣ | | | | | |
|---|---|---|---|---|---|---|---|
| | | ಅನಕ್ಷರಸ್ಥರು | ಪ್ರಾಥಮಿಕ | ಪ್ರೌಢ | ಪ.ಪೂರ್ವ | ಅನ್ವಯಿಸುವುದಿಲ್ಲ** | ಒಟ್ಟು |
| ೦೧ | ಅನಕ್ಷರಸ್ಥರು | ೧೧ (೧೫.೭೨) | ೧೫ (೨೧.೪೪) | ೦೫ (೭.೧೫) | — | ೧೦ (೧೪.೨೮) | ೪೧ (೫೮.೫೭) |
| ೦೨ | ಪ್ರಾಥಮಿಕ | ೦೧ (೧.೪೨) | ೧೭ (೨೪.೨೮) | ೦೭ (೧೦) | — | ೦೨ (೨.೮೬) | ೨೭ (೩೮.೫೭) |
| ೦೩ | ಪ್ರೌಢ | | ೦೧ (೧.೪೨) | ೦೧ (೧.೪೨) | — | — | ೦೨ (೨.೮೬) |
| ೦೪ | ಪದವಿಪೂರ್ವ | — | — | — | — | — | — |
| ೦೫ | ಪದವಿ | — | — | — | — | — | — |
| | ಒಟ್ಟು | ೧೨ (೧೭.೧೪) | ೩೩ (೪೭.೧೪) | ೧೩ (೧೮.೫೮) | | ೧೨ (೧೭.೧೪) | ೭೦ (೧೦೦.೦೦ ) |

** ಅನ್ವಯಿಸುವುದಿಲ್ಲಃವಿಧವೆಯರು ,ದೇವದಾಸಿಯರು

ಕೋಷ್ಟಕ ೩. ೭ ಪ್ರಕಾರ ಚುನಾಯಿತ ಮಾಹಿತಿದಾರರ ಹೆಚ್ಚಿನ ಗಂಡಂದಿರು ಪ್ರಾಥಮಿಕ ಶಿಕ್ಷಣವನ್ನು ಪಡೆದಿದ್ದಾರೆ. ಪ್ರಾಥಮಿಕ ಶಿಕ್ಷಣ ಪಡೆದ ಗಂಡಂದಿರು ಶೇಕಡ ೪೮ರಷ್ಟು ಇದ್ದಾರೆ. ಪ್ರೌಢ ಶಿಕ್ಷಣವನ್ನು ಪಡೆದವರು ಶೇಕಡ ೧೯ ರಷ್ಟು, ಅನಕ್ಷರಸ್ಥರು ಶೇಕಡ ೧೮ರಷ್ಟು ಇದ್ದಾರೆ. ಉನ್ನತ ಶಿಕ್ಷಣ ಹೊಂದಿದ ಗಂಡಂದಿರು ಯಾರು ಇಲ್ಲ. ಗಂಡನು ತನ್ನ ಚುನಾಯಿತ ಹೆಂಡತಿಗೆ ಹಲವುಬಾರಿ ಪಂಚಾಯತಿ ಕಾರ್ಯಕಲಾಪಗಳಲ್ಲಿ ಸೂಕ್ತ ಮಾರ್ಗದರ್ಶನ ನೀಡುತ್ತಿರುತ್ತಾನೆ.

**ಚುನಾಯಿತ ಮಹಿಳೆ ಮತ್ತು ಗಂಡಂದಿರ ಉದ್ಯೋಗ**

ಚುನಾಯಿತ ಮಹಿಳೆಯರ ಉದ್ಯೋಗವು ಎಷ್ಟು ಮುಖ್ಯವೋ ಅದೇ ರೀತಿ ಅವರ ಗಂಡಂದಿರ ಉದ್ಯೋಗ ಅಷ್ಟೇ ಪ್ರಮುಖವಾದದ್ದು. ಚುನಾಯಿತ ಮಹಿಳೆ ಮತ್ತು ಅವರ ಗಂಡಂದಿರ ಉದ್ಯೋಗವನ್ನು ಕೋಷ್ಟಕ ೩.೮ರಲ್ಲಿ ವಿವರಿಸಲಾಗಿದೆ.

ಕೋಷ್ಟಕ ೩.೮

ಚುನಾಯಿತ ಮಹಿಳಾ ಮಾಹಿತಿದಾರರ ಮತ್ತು ಅವರ ಗಂಡಂದಿರ ಉದ್ಯೋಗ

| ಕ್ರ.ಸಂ. | ಮಹಿಳೆಯರ ಉದ್ಯೋಗ | | | ಗಂಡಂದಿರ | ಉದ್ಯೋಗ | | |
|---|---|---|---|---|---|---|---|
| | | ಕೂಲಿ | ಕೃಷಿ | ಸರ್ಕಾರಿ | ವ್ಯಾಪಾರ | ಅನ್ವಯಿಸುವುದಿಲ್ಲ | ಒಟ್ಟು ಶೇಕಡ |
| ೦೧ | ಕೂಲಿ | ೦೧ (೧.೪೨) | ೧೫ (೨೧.೪೨) | .. | .. | ೦೮ (೧೧.೪೪) | ೨೪ (೩೪.೨೮) |
| ೦೨ | ಕೃಷಿ | .. | ೦೯ (೧೨.೮೫) | .. | ೦೧ (೧.೪೨) | ೦೧ (೧.೪೨) | ೧೧ (೧೫.೭೯) |
| ೦೩ | ವ್ಯಾಪಾರ | .. | ೦೧ (೧.೪೨) | .. | ೦೨ (೨.೮೬) | ೦೨ (೨.೮೬) | ೦೩ (೪.೨೮) |
| ೦೪ | ಮನೆಗೆಲಸ | ೦೧ (೧.೪೨) | ೨೪ (೩೭.೧೬) | .. | ೦೨ (೨.೮೬) | ೦೨ (೨.೮೬) | ೨೯ (೪೧.೪೨) |
| ೦೫ | ಇತರ | .. | .. | ೦೨ (೨.೮೫) | .. | ೦೧ (೧.೪೩) | ೦೩ (೪.೨೮) |
| | ಒಟ್ಟು | ೦೨ (೨.೮೫) | ೪೯ (೭೦.೦೦) | ೦೨ (೨.೮೫) | ೦೫ (೭.೧೫) | ೧೨ (೧೭.೧೫) | ೭೦ (೧೦೦.೦೦) |

ಕೋಷ್ಟಕ ೩.೮ನ್ನು ಗಮನಿಸಿದಾಗ ಶೇಕಡ ೭೦ರಷ್ಟು ಗಂಡಂದಿರು ಕೃಷಿಯನ್ನು ಅವಲಂಬಿಸಿದ್ದಾರೆ. ಒಟ್ಟು ಶೇಕಡ ೩೪.೨೮ರಷ್ಟು ಮಹಿಳೆಯವರು ಕೂಲಿ ಮಾಡುವವರಿದ್ದಾರೆ. ಗಂಡಂದಿರು ಕೂಲಿ ಮಾಡುವವರು ಶೇಕಡ ೨.೮೫ರಷ್ಟು ಮಾತ್ರ. ಕೂಲಿ ಮಾಡುವ ಮಹಿಳೆಯರು ಹೆಚ್ಚಾಗಿ ದೇವದಾಸಿ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ. ಚುನಾಯಿತ ಮಹಿಳೆಯರು ಶೇಕಡ ೧೫ರಷ್ಟು ಕೃಷಿಯನ್ನು ಅವಲಂಬಿಸಿದ್ದಾರೆ. ಕೋಷ್ಟಕ ೩.೯ರಲ್ಲಿ ವಿವರಗಳನ್ನು ನೀಡಲಾಗಿದೆ.

**ಚುನಾಯಿತ ಮಹಿಳಾ ಮಾಹಿತಿದಾರರ ಮಕ್ಕಳ ಶಿಕ್ಷಣ ಮಟ್ಟ.**

ಚುನಾಯಿತ ಮಹಿಳೆಗೆ ಶಿಕ್ಷಣವು ಎಷ್ಟು ಮುಖ್ಯವೋ, ಅದರಂತೆ ಅವರ ಗಂಡಂದಿರ ಶಿಕ್ಷಣವು ಮುಖ್ಯ, ಹಾಗೆಯೇ ಚುನಾಯಿತ ಮಹಿಳೆಯರ ಮಕ್ಕಳ ಶಿಕ್ಷಣವೂ ಪ್ರಮುಖ ಅಂಶವಾಗಿದೆ. ಮಕ್ಕಳ ಶಿಕ್ಷಣ ಕುರಿತ ವಿವರವನ್ನು ಕೋಷ್ಟಕ ೩.೯ರಲ್ಲಿ ನೋಡಬಹುದು.

**ಕೋಷ್ಟಕ.೩.೯**

**ಮಹಿಳಾ ಚುನಾಯಿತ ಮಾಹಿತಿದಾರರ ಮಕ್ಕಳ ಶಿಕ್ಷಣ ಮಟ್ಟ**

| | | ಲಿಂಗ | | |
|---|---|---|---|---|
| ಕ್ರಮ.ಸಂಖ್ಯೆ | ಶಿಕ್ಷಣ | ಹೆಣ್ಣು ಮಕ್ಕಳು | ಗಂಡು ಮಕ್ಕಳು | ಒಟ್ಟು |
| ೦೧ | ಅನಕ್ಷರಸ್ಥರು | ೧೭ (೬. ೭೨) | ೨೯ (೧೧.೭೮) | ೪೬ (೧೮.೭೦) |
| ೦೨ | ಪ್ರಾಥಮಿಕ (೧ ರಿಂದ ೭) | ೬೭ (೨೭.೨೪) | ೫೭ (೨೩.೧೭) | ೧೨೪ (೫೦.೪೧) |
| ೦೩ | ಪ್ರೌಢ | ೧೮ (೭ .೩೧) | ೩೪ (೧೩.೮೩) | ೫೨ (೨೧.೧೪) |
| ೦೪ | ಪದವಿ ಪೂರ್ವ | ೦೨ (೦.೮೧) | ೦೬ (೨.೪೪) | ೦೮ (೩.೨೫) |
| ೦೫ | ಪದವಿ | ೦೨ (೦.೮೧) | ೦೬ (೨.೪೪) | ೦೮ (೩.೨೫) |
| ೦೬ | ಇತರೆ | ೦೨ (೦.೮೧) | ೦೬ (೨.೪೪) | ೦೮ (೩.೨೫) |
| | ಒಟ್ಟು | ೧೦೮ (೪೩.೯೦) | ೧೩೮ (೫೬.೧೦) | ೨೪೬ (೧೦೦.೦೦) |

ಚುನಾಯಿತ ೭೦ ಮಹಿಳಾ ಮಾಹಿತಿದಾರರು ಒಟ್ಟು ೨೪೬ ಮಕ್ಕಳಲ್ಲಿ, ಹೆಣ್ಣು ಮಕ್ಕಳಸಂಖ್ಯೆ ೧೦೮ (ಶೇ ೪೩.೯೦) ಗಂಡು ಮಕ್ಕಳ ಸಂಖ್ಯೆ ೧೩೮ (ಶೇ ೫೬.೧೦) ಹೊಂದಿದ್ದಾರೆ. ಒಟ್ಟು ಮಕ್ಕಳಲ್ಲಿ ಅಧಿಕವಾಗಿ ಗಂಡು ಮಕ್ಕಳು ಇರುವುದರಿಂದ ಇಲ್ಲಿಯೂ ನಾವು ಹೆಣ್ಣು ಮಕ್ಕಳ ಕುರಿತಾದ ಮನೋಭಾವನೆಯನ್ನು ಗುರುತಿಸಬಹುದು. ಒಟ್ಟು ಶೇಕಡ ೧೮. ೭೦ರಷ್ಟು ಅನಕ್ಷರಸ್ಥ ಮಕ್ಕಳಲ್ಲಿ ಶೇಕಡ ೭ರಷ್ಟು ಹೆಣ್ಣುಮಕ್ಕಳು. ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು ಪ್ರಾಥಮಿಕ ಶಿಕ್ಷಣವನ್ನು ಪಡೆದಿದ್ದರೆ, ಪ್ರೌಢಶಿಕ್ಷಣದ ಒಟ್ಟು ಶೇಕಡ ೨೨ರಲ್ಲಿ ಶೇಕಡ ೮ರಷ್ಟು ಹೆಣ್ಣುಮಕ್ಕಳು. ಶೇಕಡ ೧೩ರಷ್ಟು ಗಂಡುಮಕ್ಕಳು ಪ್ರೌಢ ಶಿಕ್ಷಣವನ್ನು ಪಡೆದಿದ್ದಾರೆ. ನಮ್ಮ ಮಾಹಿತಿದಾರರ ಒಟ್ಟು ಮಕ್ಕಳಲ್ಲಿ ಪ್ರಾಥಮಿಕ ಶಿಕ್ಷಣ ಮಟ್ಟದಲ್ಲಿ ಹೆಣ್ಣು ಮಕ್ಕಳು ಅಧಿಕವಾಗಿದ್ದರೂ, ಪ್ರೌಢಶಿಕ್ಷಣ ಮಟ್ಟದಲ್ಲಿ ಹೆಣ್ಣುಮಕ್ಕಳ ಸಂಖ್ಯೆ ಕಡಿಮೆ ಇರುವುದು ನಮ್ಮ ಅಧ್ಯಯನದ ಮೂಲಕ ತಿಳಿಯಬಹುದು. ಪದವಿಪೂರ್ವ, ಪದವಿ ಹಾಗೂ ಅದಕ್ಕಿಂತ ಉನ್ನತ ಶಿಕ್ಷಣ ಮಟ್ಟದಲ್ಲಿ ಗಂಡು ಮಕ್ಕಳ ಪ್ರಮಾಣ ಅಧಿಕವಾಗಿದೆ. ಹೆತ್ತವರಿಗಿಂತ ಮಕ್ಕಳ ಶಿಕ್ಷಣದ ಮಟ್ಟವು ಸುಧಾರಿಸಿದ್ದು, ಉತ್ತಮ ಪ್ರಗತಿಯಾಗಿದೆ. ಜನರು ತಮ್ಮ ಮಕ್ಕಳ ಶಿಕ್ಷಣದ ಕುರಿತಾದ ನಿಲುವನ್ನು ಬದಲಾಯಿಸುತ್ತಿದ್ದಾರೆ. ಮಕ್ಕಳ ಉತ್ತಮ ಶಿಕ್ಷಣವು ಉತ್ತಮವಾದ ಭವಿಷ್ಯ ರೂಪಿಸಲು ಸಹಕಾರಿಯಾಗುತ್ತದೆ.

ಈ ಅಧ್ಯಾಯದಲ್ಲಿ ಈ ಮೊದಲೇ ಹೇಳಿರುವಂತೆ ಪ್ರಸ್ತುತ ಅಧ್ಯಯನಕ್ಕೆ ಮಾಹಿತಿಯನ್ನು ಗ್ರಾಮಪಂಚಾಯಿತಿಯ ೭೦ ಚುನಾಯಿತ ಮಹಿಳೆಯರಿಂದ ಪಡೆದುಕೊಳ್ಳಲಾಗಿದೆ. ಇವರಲ್ಲಿ ಶೇಕಡ ೯೦ ರಷ್ಟು ಅಧಿಕ ಮಹಿಳೆಯರು ೨೬ ರಿಂದ ೪೫ ವರ್ಷದೊಳಗಿನ ಗುಂಪಿಗೆ ಸೇರಿದವರಾಗಿದ್ದಾರೆ. ಅಂದರೆ ಹೆಚ್ಚಿನ ಸಂಖ್ಯೆಯ ಚುನಾಯಿತ ಮಹಿಳೆಯರು ಸಾಧಾರಣವಾಗಿ ೨೬ ರಿಂದ ೪೫ ವರ್ಷದೊಳಗಿನವರು .

ಚುನಾಯಿತ ಮಹಿಳಾ ಮಾಹಿತಿದಾರರಲ್ಲಿ ಶಿಕ್ಷಣದ ಮಟ್ಟವನ್ನು ಪರೀಕ್ಷಿಸಿದಾಗ ಶೇಕಡ ೬೦ರಷ್ಟು ಮಹಿಳೆಯರು ಅನಕ್ಷರಸ್ಥರಾಗಿದ್ದು, ಶೇಕಡ ೪೦ರಷ್ಟು ಮಹಿಳೆಯರು ಪ್ರಾಥಮಿಕ ಶಿಕ್ಷಣವನ್ನು ಮಾತ್ರ ಪಡೆದಿರುತ್ತಾರೆ. ಮಹಿಳಾ ಅಧ್ಯಕ್ಷರು ಕೆಲವರು ಅನಕ್ಷರಸ್ಥರಿರುವುದು ಗಮನಿಸಬೇಕಾದ ಅಂಶವಾಗಿದೆ. ಈ ಅಧ್ಯಯನದ ಚುನಾಯಿತ ಮಾಹಿತಿದಾರರ ಮಹಿಳೆಯರಲ್ಲಿ ಶೇಕಡಾ ೪೦ರಷ್ಟು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದವರು. ಸುಮಾರು ಶೇಕಡ ೬೫ರಷ್ಟು ಮಹಿಳೆಯರ ಆದಾಯವು ೩೫೦೦-೫೦೦೦ ರೂ ಒಳಗಿದ್ದು, ಹೆಚ್ಚಿನ ಸಂಖ್ಯೆಯಲ್ಲಿ ಆಯ್ಕೆಯಾದ ಮಹಿಳೆಯರು ಕಡಿಮೆ ಆದಾಯದ ವರ್ಗಕ್ಕೆ ಸೇರಿದವರಾಗಿದ್ದಾರೆ. ಹೆಚ್ಚಿನ ಮಹಿಳಾ ಮಾಹಿತಿದಾರರು ವಿವಾಹಿತರಾಗಿದ್ದು, ದೇವದಾಸಿಯರು ಸಹ ಶೇಕಡ ೮ ರಷ್ಟಿದ್ದಾರೆ. ಮಾಹಿತಿದಾರರ ಗಂಡಂದಿರ ಶಿಕ್ಷಣ ಮಟ್ಟವನ್ನು ನೋಡಿದಾಗ ಹೆಚ್ಚು ಗಂಡಂದಿರು ಪ್ರಾಥಮಿಕ ಶಿಕ್ಷಣವನ್ನು ಪಡೆದಿದ್ದಾರೆ. ಮಾಹಿತಿದಾರರ ಮಕ್ಕಳ ಶಿಕ್ಷಣ ಮಟ್ಟವನ್ನು ಗಮನಿಸಿದಾಗ ಮಕ್ಕಳ ಶಿಕ್ಷಣದ ಪ್ರಮಾಣದ ಮಟ್ಟವನ್ನು ಹೆಚ್ಚಿರುವುದು ಕಂಡು ಬಂದಿದೆ. ಇದು ಒಂದು ಒಳ್ಳೆಯ ಸಂಗತಿಯಾಗಿದೆ. ಒಟ್ಟಾರೆ ಹೇಳುವುದಾದರೆ ಪ್ರಸ್ತುತ ಅಧ್ಯಯನದ ಚುನಾಯಿತ ಮಹಿಳೆಯರು ವಿಭಿನ್ನ ಸಾಮಾಜಿಕ ಹಾಗೂ ಆರ್ಥಿಕ ಗುಂಪಿಗೆ ಸೇರಿದವರಾಗಿದ್ದಾರೆ.

# ಅಧ್ಯಾಯ ೪

## ಗ್ರಾಮಸಭೆ ಮತ್ತು ಚುನಾಯಿತ ಮಹಿಳೆಯರು

ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಜನರು ಪಾಲ್ಗೊಳ್ಳುವಂತೆ ಮಾಡುವುದು ಪಂಚಾಯತ್ ರಾಜ್‌ನ ಮುಖ್ಯ ಗುರಿಯಾಗಿದೆ. ಜೊತೆಗೆ ಜನರು ತಮ್ಮನ್ನೇ ತಾವು ಆರಿಸಿಕೊಳ್ಳುವ ಅಧಿಕಾರವು ಇವರಿಗಿದೆ. ಜಿಲ್ಲಾ ಪರಿಷತ್‌ನ ಮತದಾರರ ಪಟ್ಟಿಯಲ್ಲಿ ಆಯಾ ಗ್ರಾಮದ ಎಲ್ಲಾ ಮತದಾರರು ಗ್ರಾಮ ಸಭೆಯ ಸದಸ್ಯರೆಂದು ಪರಿಗಣಿಸಲಾಗಿದೆ. ೧೯೯೩ರ ಅಧಿನಿಯಮದ ೩ನೇ ಪ್ರಕರಣವು ಗ್ರಾಮಸಭೆಯ ವ್ಯಾಪ್ತಿಯನ್ನು ಸೂಕ್ತವಾಗಿ ಸೂಚಿಸಿ ಅದರ ಕಾರ್ಯ ವೈಖರಿಯನ್ನು ಖಚಿತವಾಗಿ ನಿಗಧಿಪಡಿಸುತ್ತದೆ.

ಕಾಲಕಾಲಕ್ಕೆ ಗ್ರಾಮಸಭೆಗಳ ಸಭೆ ಸೇರಬೇಕು. ಎರಡು ಸಭೆಗಳ ನಡುವೆ ಆರು ತಿಂಗಳ ಅಂತರ ಇರಕೂಡದು. ಗ್ರಾಮಸಭೆಯ ಅಧ್ಯಕ್ಷತೆಯನ್ನು ಸಂಬಂಧಪಟ್ಟ ಪಂಚಾಯತಿಯ ಅಧ್ಯಕ್ಷರು ವಹಿಸುತ್ತಾರೆ. ಗೈರು ಹಾಜರಿಯಲ್ಲಿ ಉಪಾಧ್ಯಕ್ಷರು ಅಧ್ಯಕ್ಷತೆಯನ್ನು ವಹಿಸುತ್ತಾರೆ. ೧. ಗ್ರಾಮ ಪಂಚಾಯಿತಿಯು ಗ್ರಾಮ ಸಭೆಯನ್ನು ಕರೆಯಲು ತಪ್ಪಿದ್ದಲ್ಲಿ ಕಾರ್ಯನಿರ್ವಾಹಕ ಅಧಿಕಾರಿಯು ಗ್ರಾಮಸಭೆಯನ್ನು ಕರೆಯತಕ್ಕದ್ದು.

೨. ಗ್ರಾಮಸಭೆಯು ಈ ಕೆಳಕಂಡ ವಿಷಯ ಕುರಿತು ಪರಿಶೀಲಿಸತಕ್ಕದ್ದು ಮತ್ತು ಗ್ರಾಮ ಪಂಚಾಯಿತಿಯ ಈ ಬಗ್ಗೆ ಶಿಫಾರಸ್ಸು ಮಾಡಬಹುದು.

ಅ. ಗ್ರಾಮ ಪಂಚಾಯಿತಿಯಗಳ ವಾರ್ಷಿಕ ಲೆಕ್ಕ ಪತ್ರಗಳ ವಿವರಣೆ.

ಆ. ಹಿಂದಿನ ವರ್ಷಕ್ಕೆ ಸಂಬಂಧಪಟ್ಟ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ವರದಿ ಮತ್ತು ಪ್ರಸಕ್ತ ವರ್ಷದಲ್ಲಿ ಕೈಗೊಳ್ಳಬೇಕಾದ ಅಭಿವೃದ್ಧಿ ಕಾರ್ಯಕ್ರಮಗಳು.

ಇ. ಗ್ರಾಮದಲ್ಲಿರುವ ಸಮಾಜದ ಎಲ್ಲಾ ವರ್ಗಗಳ ಜನರಲ್ಲಿ ಏಕತೆ ಮತ್ತು ಕಾರ್ಯದಕ್ಷತೆಯನ್ನು ಬೆಳಸಿಕೊಂಡು ಬರುವುದು.

ಈ. ಗ್ರಾಮದಲ್ಲಿರುವ ಸಮಾಜದ ಎಲ್ಲಾ ವರ್ಗಗಳ ಜನರಲ್ಲಿ ಏಕತೆ ಮತ್ತು ಸೌಹಾರ್ದತೆಯನ್ನು ಬೆಳಸಿಕೊಂಡು ಬರುವುದು.

೩. ಗ್ರಾಮಸಭೆಯಲ್ಲಿರುವ ಸಲಹೆಗಳನ್ನು ಮತ್ತು ಶಿಫಾರಸ್ಸುಗಳನ್ನು ಗ್ರಾಮ ಪಂಚಾಯಿತಿಯು ಸೂಕ್ತವಾಗಿ ಪರಿಶೀಲಿಸತಕ್ಕದ್ದು.

೪. ಗ್ರಾಮಸಭೆಗಳನ್ನು ಕರೆಯುವ ಮತ್ತು ನಡೆಸುವ, ಕಾರ್ಯವಿಧಾನಗಳ ಕಾರ್ಯಗಳನ್ನು ನಿಗಧಿಪಡಿಸಬೇಕು.

**ಗ್ರಾಮಸಭೆಯ ಕಾರ್ಯಗಳು**

೧. ಸಮುದಾಯ ಕಲ್ಯಾಣ ಕಾರ್ಯಕ್ರಮಗಳಿಗಾಗಿ ಸ್ವಯಂ ಸೇವೆಯ ರೂಪದ ಮತ್ತು ನಗದು ರೂಪದ ಸಂದಾಯವನ್ನು ಸಂಗ್ರಹಿಸುವುದು.

೨. ಗ್ರಾಮಕ್ಕೆ ಸಂಬಂಧಪಟ್ಟ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸುವ ಸಲುವಾಗಿ ಫಲಾನುಭವಿಗಳನ್ನು ಗುರುತಿಸುವುದು.

ಅಂದರೆ ಗ್ರಾಮಸಭೆಯು ಗ್ರಾಮಕ್ಕೆ ಸಂಬಂಧಪಟ್ಟ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ನೆರವಾಗುವುದು. ಆಯಾ ಗ್ರಾಮದ ವ್ಯಾಪ್ತಿಯಲ್ಲಿ ಎಲ್ಲಾ ಸದಸ್ಯರ ಐಕ್ಯತೆ, ಸೌಹಾರ್ದತೆ ಬೆಳೆಸುವ, ವಯಸ್ಕರ ಶಿಕ್ಷಣಕ್ಕಾಗಿ ಶ್ರಮಿಸುವ, ಗ್ರಾಮ ಪಂಚಾಯಿತಿ ಕಾರ್ಯ ನಿರ್ವಹಣೆಗಾಗಿ ಸ್ವಯಂ ಸೇವೆ, ವಸ್ತುರೂಪದ ಮತ್ತು ನಗದ ವಂತಿಕೆಗಳನ್ನು ಸ್ವೀಕರಿಸುವ ಗ್ರಾಮವ್ಯಾಪ್ತಿ, ಅಭಿವೃದ್ಧಿ ಯೋಜನೆಗಳ ಫಲಾನುಭವಿಗಳನ್ನು ಗುರುತಿಸುವ, ಅವುಗಳನ್ನು ಕಾರ್ಯಗತಗೊಳಿಸುವಲ್ಲಿ ಸ್ಥಿರವಾಗುವ ಹಕ್ಕು ಸಹ ಇರುತ್ತದೆ.

ಈ ರೀತಿಯಾಗಿ ಗ್ರಾಮಸಭೆಯ ಗ್ರಾಮದ ಜನರ ಅಭಿವೃದ್ಧಿಗಾಗಿ ತನ್ನದೇ ಆದ ಪ್ರಾಮುಖ್ಯತೆಯನ್ನು ಹೊಂದಿದೆ. ಈ ಹಿನ್ನಲೆಯಲ್ಲಿ ನಾವು ಪ್ರಸ್ತುತ ಅಧ್ಯಯನದಲ್ಲಿ ಪಂಚಾಯಿತಿಗೆ ಆಯ್ಕೆಯಾದ ಮಹಿಳೆಯರು ಎಷ್ಟರಮಟ್ಟಿಗೆ ಗ್ರಾಮ ಸಭೆಯಲ್ಲಿ ಭಾಗವಹಿಸುತ್ತಾರೆ? ಅವರು ಗ್ರಾಮಸಭೆಯ ಮೂಲಕ ಕೈಗೊಂಡ ಚಟುವಟಿಕೆಗಳಾವುವು ? ಚುನಾಯಿತ ಮಹಿಳೆಯರು ಯಾವ ರೀತಿಯಾಗಿ ಊರಿನ ಸಮಸ್ಯೆಗಳ ಬಗ್ಗೆ ಚರ್ಚೆಮಾಡುತ್ತಾರೆ? ಗ್ರಾಮಪಂಚಾಯಿತಿಗೆ ಆಯ್ಕೆಯಾದ ಸದಸ್ಯರಲ್ಲಿ ಪ್ರತಿಯೊಬ್ಬರೂ ಗ್ರಾಮಸಭೆಗೆ ಭಾಗವಹಿಸುತ್ತಿದ್ದಾರಾ? ಅವರು ಭಾಗವಹಿಸಿ ತಮ್ಮ ಪ್ರದೇಶದ ಸಮಸ್ಯೆಗಳನ್ನು ಬಗೆಹರಿಸಲು ಪ್ರಯತ್ನಿಸುತ್ತಿದ್ದಾರೆಯೇ ಎಂದು ಮಾಹಿತಿದಾರರ ಮೂಲಕ ತಿಳಿಯಲಾಗಿದೆ.

**ಚುನಾಯಿತ ಮಹಿಳೆಯರು ಗ್ರಾಮಸಭೆಯಲ್ಲಿ ಭಾಗವಹಿಸುವಿಕೆ**

ಗ್ರಾಮ ಪಂಚಾಯಿತಿಗೆ ಆಯ್ಕೆಯಾದ ಮಹಿಳೆಯರು ಮತ್ತು ಪುರುಷರು ಗ್ರಾಮಸಭೆಗೆ ಭಾಗವಹಿಸಬೇಕು. ಗ್ರಾಮಸಭೆಯು ಬಹಳ ಮುಖ್ಯವಾದ ಸಭೆ. ಏಕೆಂದರೆ ಸಾಮಾನ್ಯ ಜನರ ಕುರಿತಾದ ಸಮಸ್ಯೆಗಳು ನೇರವಾಗಿ ಪಂಚಾಯಿತಿಯ ಸದಸ್ಯರಿಗೆ ತಲುಪುತ್ತವೆ. ಈ ರೀತಿ ತಲುಪುವುದರಿಂದ ಈ ಗ್ರಾಮದಲ್ಲಿ ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೊಳ್ಳಲು ಸಹಕಾರಿಯಾಗುತ್ತದೆ. ಸರ್ಕಾರವು, ಅಭಿವೃದ್ಧಿ ಚಟುವಟಿಕೆಗಳಲ್ಲಿ ಜನರು ಭಾಗವಹಿಸಬೇಕು, ಸಹಭಾಗಿಗಳಾಗಬೇಕು ಎಂಬ ದೃಷ್ಟಿಯನ್ನು ಇಟ್ಟುಕೊಂಡು ಗ್ರಾಮಸಭೆಗೆ ಒತ್ತು .

ಕೊಟ್ಟಿವೆ. ಆದರೆ ಗ್ರಾಮಸಭೆಯ ಮಹತ್ವವು ಕೇವಲ ಸೈದ್ಧಾಂತಿಕವಾಗಿದೆ. ವಾಸ್ತವ ರೂಪದಲ್ಲಿ ಗ್ರಾಮಸಭೆಗಳು ಸರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಪಂಚಾಯಿತಿಯ ಪುರುಷ ಸದಸ್ಯರು ಮಾತ್ರ ಹೆಚ್ಚಾಗಿ ಭಾಗವಹಿಸುತ್ತಾ ಇದ್ದಾರೆ. ಮಹಿಳಾ ಸದಸ್ಯರ ಭಾಗವಹಿಸುವಿಕೆಯು ಬಹಳ ಕಡಿಮೆ ಇರುವುದು ನಮ್ಮ ಅಧ್ಯಯನದ ಮೂಲಕ ಕಂಡು ಬಂದಿದೆ. ಎಷ್ಟರ ಮಟ್ಟಿಗೆ ಮಹಿಳೆಯರು ಗ್ರಾಮಸಭೆಗಳಲ್ಲಿ ಭಾಗವಹಿಸುತ್ತಾರೆ ಎಂಬುವ ವಿವರವನ್ನು ಕೋಷ್ಟಕ ೪.೧ರಲ್ಲಿ ನೀಡಲಾಗಿದೆ.

ಕೋಷ್ಟಕ ೪.೧

ಗ್ರಾಮಸಭೆಯಲ್ಲಿ ಚುನಾಯಿತ ಮಹಿಳೆಯರ ಭಾಗವಹಿಸುವಿಕೆ

| ಕ್ರ.ಸಂಖ್ಯೆ | ಚುನಾಯಿತ ಮಹಿಳೆಯರು | ಸಂಖ್ಯೆ | ಶೇಕಡ |
|---|---|---|---|
| ೦೧ | ಭಾಗವಹಿಸುವುದಿಲ್ಲ | ೫೩ | ೭೫.೭೨ |
| ೦೨ | ಭಾಗವಹಿಸುತ್ತಾರ | ೧೦ | ೧೪.೨೮ |
| ೦೩ | ಗೊತ್ತಿಲ್ಲ | ೦೭ | ೧೦.೦೦ |
| | ಒಟ್ಟು | ೭೦ | ೧೦೦.೦೦ |

ಕೋಷ್ಟಕ ೪.೧ ರ ಮಾಹಿತಿಯನ್ನು ಗಮನಿಸಿದರೆ ಹೆಚ್ಚು ಸಂಖ್ಯೆಯಲ್ಲಿ ಅಂದರೆ ಶೇಕಡ ೭೫ರಷ್ಟು ಚುನಾಯಿತ ಮಹಿಳೆಯರು ಸಭೆಯಲ್ಲಿ ಭಾಗವಹಿಸದೇ ಇರುವುದು ಕಂಡು ಬಂದಿದೆ. ಮೊದಲೇ ತಿಳಿಸಿರುವಂತೆ ಪಂಚಾಯಿತಿಗೆ ಚುನಾಯಿತರಾದ ಮಹಿಳೆಯರಲ್ಲಿ ಅಧಿಕ ಸಂಖ್ಯೆಯಲ್ಲಿ ಅನಕ್ಷರಸ್ಥರಿದ್ದಾರೆ. ಅವರಿಗೆ ರಾಜಕೀಯ ತಿಳುವಳಿಕೆ ಬಹಳ ಕಡಿಮೆ ಇರುವುದರಿಂದ ಇಲ್ಲಿ ಹೆಚ್ಚು ಚುನಾಯಿತ ಮಹಿಳೆಯರು ಭಾಗವಹಿಸದೇ ಇರಲು ಒಂದು ಕಾರಣ ಎನ್ನಬಹುದು. ನಮ್ಮ ನಮೂನೆಯಲ್ಲಿನ ಶೇಕಡಾ ೧೫ರಷ್ಟು ಮಹಿಳೆಯರು ಗ್ರಾಮಸಭೆಯಲ್ಲಿ ಭಾಗವಹಿಸುತ್ತಿದ್ದಾರೆ. ಇವರೆಲ್ಲರು ವಿದ್ಯಾವಂತರಾಗಿದ್ದಾರೆ. ಈ ರೀತಿ ಶಿಕ್ಷಣವು ಚುನಾಯಿತ ಮಹಿಳೆಯರ ಭಾಗವಹಿಸುವಿಕೆಯಲ್ಲಿ ನೇರ ಸಂಬಂಧವನ್ನು ನಾವು ಕಾಣಬಹುದಾಗಿದೆ. ಚುನಾಯಿತ ಮಹಿಳೆಯರು ಗ್ರಾಮಸಭೆಯಲ್ಲಿ ಭಾಗವಹಿಸುವಿಕೆಯ ಪ್ರಮಾಣ ಕಡಿಮೆಯಾಗಿರುವುದರಿಂದ ಮಹಿಳೆಯರು ಪಂಚಾಯಿತಿಗೆ ಆಯ್ಕೆಯಾದರೂ ತಮ್ಮ ಸಲಹೆ ಸೂಚನೆಗಳನ್ನು ಮತ್ತು ಸಮಸ್ಯೆಗಳನ್ನು ಹೇಳಿಕೊಳ್ಳಲು ಅಶಕ್ತರಾಗಿದ್ದಾರೆ.

### ಗ್ರಾಮಸಭೆಯಿಂದ ಪ್ರಯೋಜನ

ಗ್ರಾಮಸಭೆ ಒಂದು ಮಹತ್ವದ ಸಭೆಯಾಗಿದೆ. ಗ್ರಾಮಸಭೆಯಿಂದ ಚುನಾಯಿತ ಮಹಿಳೆಯರು ಎಷ್ಟರ ಮಟ್ಟಿಗೆ ಪ್ರಯೋಜನವನ್ನು ಪಡೆದು ಗ್ರಾಮದ ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೊಂಡಿದ್ದಾರೆ ಎಂಬುವನ್ನರಿಯುವುದು ಮುಖ್ಯವಾಗಿದೆ. ಈ ಕಾರಣಕ್ಕಾಗಿ ಗ್ರಾಮಸಭೆಯ ಮೂಲಕ ಆಗುವ ಪ್ರಯೋಜನ ಕುರಿತು ಮಹಿಳಾ ಮಾಹಿತಿದಾರರನ್ನು ಪ್ರಶ್ನಿಸಲಾಯಿತು. ಈ ಕುರಿತಾದ ಮಾಹಿತಿಯನ್ನು ಕೋಷ್ಟಕ ೪.೨ ರಲ್ಲಿ ನೀಡಲಾಗಿದೆ.

ಕೋಷ್ಟಕ ೪.೨

ಗ್ರಾಮಸಭೆಯಿಂದ ಜನತೆಗಾಗುವ ಪ್ರಯೋಜನಗಳು.

| ಕ್ರ.ಸಂಖ್ಯೆ | ಪ್ರಯೋಜನ | ಸಂಖ್ಯೆ | ಶೇಕಡ |
|---|---|---|---|
| ೦೧ | ಪ್ರಯೋಜನವಾಗಿಲ್ಲ | ೫೮ | ೮೨.೮೫ |
| ೦೨ | ಪ್ರಯೋಜನವಾಗಿದೆ | ೧೨ | ೧೭.೧೫ |
| | ಒಟ್ಟು | ೭೦ | ೧೦೦.೦೦ |

ಕೋಷ್ಟಕ ೪.೨ ನ್ನು ಗಮನಿಸಿದಾಗ ೭೦ ಜನ ಚುನಾಯಿತ ಮಹಿಳೆಯರು ಎಷ್ಟರ ಮಟ್ಟಿಗೆ ಜನರಿಗೆ ಅಭಿವೃದ್ಧಿ ಚಟುವಟಿಕೆಗಳ ಪ್ರಯೋಜನವನ್ನು ತಲುಪಿಸಿದ್ದಾರೆ ಎಂಬುದನ್ನು ಗಮನಿಸಬಹುದು. ಇಲ್ಲಿ ಹೆಚ್ಚು ಜನರಿಗೆ ಗ್ರಾಮಸಭೆಯಿಂದ ಪ್ರಯೋಜನ ಆಗದೇ ಇರುವುದನ್ನು ಗುರುತಿಸಲಾಗಿದೆ. ಶೇಕಡಾ ೮೨ ರಷ್ಟು ಸ್ವತಃ ಮಹಿಳೆಯರೇ ತಮ್ಮಿಂದ ಯಾವುದೇ ಜನರಿಗೆ ಪ್ರಯೋಜನ ಆಗಿಲ್ಲವೆಂದಿದ್ದಾರೆ. ಉಳಿದ ಶೇಕಡ ೧೮ರಷ್ಟು ಮಾತ್ರ ಮಹಿಳೆಯರು ಜನರಿಗೆ ಪ್ರಯೋಜನವನ್ನು ದೊರಕಿಸಿಕೊಟ್ಟಿದ್ದಾರೆ. ಈ ಅಧ್ಯಯನದಲ್ಲಿ ಹೆಚ್ಚು ಚುನಾಯಿತಿ ಮಹಿಳೆಯರು ಒತ್ತಾಯದಿಂದ ರಾಜಕೀಯ ಪ್ರವೇಶ ಮಾಡಿದ್ದಾರೆ. ಇದರಿಂದ ಮಹಿಳೆಯರು ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೊಂಡಿಲ್ಲ ಎಂಬುದನ್ನು ಗಮನಿಸಬಹುದು. ಈ ಮುಂಚೆ ತಿಳಿಸಿರುವಂತೆ ಭಾಗವಹಿಸುವಿಕೆಯ ಸಂಖ್ಯೆಯು ಕಡಿಮೆ ಇದೆ. ಅಂದರೆ ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೊಳ್ಳದೆ ಇರುವುದು ಹೆಚ್ಚು ಕಂಡು ಬಂದಿದೆ ಎಂಬುದನ್ನು ಗುರುತಿಸಬಹುದು.

### ಗ್ರಾಮಸಭೆಯಲ್ಲಿ ಚರ್ಚೆ

ಯಾವುದೇ ಒಂದು ಪಂಚಾಯಿತಿ ಸಭೆಗಳಲ್ಲಿ ಮತ್ತು ಗ್ರಾಮಸಭೆಗಳಲ್ಲಿ ಚರ್ಚೆಯು ಪ್ರಮುಖವಾದ ಪಾತ್ರವನ್ನುವಹಿಸುತ್ತದೆ. ಸಮಸ್ಯೆಗಳ ನಿವಾರಣೆಯಲ್ಲಿ ಚರ್ಚೆಯು ಬಹಳ ಅವಶ್ಯಕ. ಪಂಚಾಯಿತಿಯ ಸದಸ್ಯರು ಭಿನ್ನ ಭಿನ್ನವಾದ ಅಭಿಪ್ರಾಯಗಳನ್ನು ಹೊಂದಿರುತ್ತಾರೆ. ಈ ಭಿನ್ನವಾದ ಅಭಿಪ್ರಾಯಗಳಲ್ಲಿ ಪ್ರಾಶಸ್ತ್ಯದ ಆಧಾರದ ಮೇಲೆ ಆಯ್ಕೆ ಮಾಡಬಹುದು. ಸೂಕ್ತ ಆಯ್ಕೆಯಲ್ಲಿ ಚರ್ಚೆಯು ಪ್ರಮುಖ ಪಾತ್ರವಹಿಸುತ್ತದೆ. ಈ ಎಲ್ಲಾ ಹಿನ್ನೆಲೆಯಲ್ಲಿ ಚುನಾಯಿತ ಮಹಿಳೆಯರು ಗ್ರಾಮಸಭೆಗಳಲ್ಲಿ ಊರಿನ ಸಮಸ್ಯೆಗಳ ಬಗ್ಗೆ ಯಾವ ರೀತಿ ಚರ್ಚೆಯಲ್ಲಿ ಭಾಗವಹಿಸುತ್ತಾರೆ? ಚರ್ಚೆ ಮಾಡುವವರ ಸಂಖ್ಯೆಯನ್ನು ಕೋಷ್ಟಕ ೪.೩ರಲ್ಲಿ ವಿವರಿಸಲಾಗಿದೆ.

ಕೋಷ್ಟಕ ೪.೩
ಗ್ರಾಮಸಭೆಯಲ್ಲಿ ಊರಿನ ಸಮಸ್ಯೆಗಳ ಬಗ್ಗೆ ಚರ್ಚೆ

| ಕ್ರ.ಸಂಖ್ಯೆ | ಚರ್ಚೆ | ಸಂಖ್ಯೆ | ಶೇಕಡ |
|---|---|---|---|
| ೦೧ | ಚರ್ಚೆ ಮಾಡುವುದಿಲ್ಲ | ೫೭ | ೮೧.೪೨ |
| ೦೨ | ಚರ್ಚೆ ಮಾಡುತ್ತಾರೆ | ೧೩ | ೧೮.೧೮ |
| | ಒಟ್ಟು | ೭೦ | ೧೦೦.೦೦ |

ಕೋಷ್ಟಕ ೪.೩ರಲ್ಲಿ ತೋರಿಸಿರುವಂತೆ ಗ್ರಾಮಸಭೆಯಲ್ಲಿ ಚರ್ಚೆ ಮಾಡದೆ ಇರುವವರ ಸಂಖ್ಯೆ ಶೇಕಡ ೮೧ರಷ್ಟು ಇದೆ. ಈ ಅಧ್ಯಯನದಲ್ಲಿ ಹೆಚ್ಚು ಮಹಿಳೆಯರು ಅನಕ್ಷರಸ್ಥರು ಮತ್ತು ರಾಜಕೀಯ ತಿಳುವಳಿಕೆ ಇಲ್ಲದವರು ಇದ್ದಾರೆ. ಇಂಥಹ ಮಹಿಳೆಯರು ಚರ್ಚೆ ಮಾಡುವುದಕ್ಕೆ ಹಿಂಜರಿಯುತ್ತಾರೆ. ಇವರಿಗೆ ಹಲವಾರು ಬಾರಿ ತರಬೇತಿಗಳನ್ನು ಕೊಟ್ಟರೂ ಇನ್ನೂ ಸುಧಾರಣೆ ಕಂಡು ಬಂದಿಲ್ಲ. ಚರ್ಚೆ ಮಾಡುವವರ ಸಂಖ್ಯೆ ಶೇಕಡ ೧೯ರಷ್ಟು ಇದ್ದು ಇದರಿಂದ ಗ್ರಾಮೀಣ ಜನರಿಗೆ ಸ್ವಲ್ಪ ಮಟ್ಟಿನ ಪ್ರಯೋಜನವಾದರೂ ಆಗುತ್ತಿದೆ ಎಂದು ಹೇಳಬಹುದು.

**ಚುನಾಯಿತ ಮಹಿಳೆಯರು ಮತ್ತು ಸರ್ಕಾರಿ ಅಧಿಕಾರಿಗಳು**

ಯಾವುದೇ ಒಂದು ಆಡಳಿತದಲ್ಲಿ ಸರ್ಕಾರಿ ಅಧಿಕಾರಿಗಳ ಪಾತ್ರ ತುಂಬಾ ಗಮನಾರ್ಹವಾದ ವಿಷಯವಾಗಿದೆ. ಗ್ರಾಮೀಣ ಪ್ರದೇಶಗಳ ಪಂಚಾಯಿತಿಗಳ ಆಡಳಿತದಲ್ಲಿ ಇವರ ನಿರ್ವಹಣೆ ತುಂಬಾ ಅವಶ್ಯಕವಾಗಿದೆ. ಏಕೆಂದರೆ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು ರಾಜಕೀಯದಲ್ಲಿ ಭಾಗವಹಿಸುವುದು ಅನಕ್ಷರಸ್ಥರು. ಆದ್ದರಿಂದ ಸರ್ಕಾರಿ ಅಧಿಕಾರಿಗಳು ಸಾಮಾನ್ಯವಾಗಿ ಉನ್ನತ ಶಿಕ್ಷಣವನ್ನು ಪಡೆದು ಕಾಯ್ದೆ ಕಾನೂನುಗಳ ಬಗ್ಗೆ ತಿಳಿದುಕೊಂಡಿರುತ್ತಾರೆ. ಗ್ರಾಮೀಣ ಪ್ರದೇಶದ ಜನರಿಗೆ ಕಾಯ್ದೆ ಕಾನೂನುಗಳ ಬಗ್ಗೆ ಅಷ್ಟು ಅರಿವು ಇರುವುದಿಲ್ಲ. ಇದರಿಂದ ಆಡಳಿತವು ಸುಗಮವಾಗಿ ನಡೆಯುವುದಿಲ್ಲ. ಮತ್ತು ಇಲ್ಲಿ ಮಧ್ಯವರ್ತಿಗಳು ಹೆಚ್ಚು ಲಾಭ ಪಡೆಯುತ್ತಾರೆ. ಇದರಿಂದ ಗ್ರಾಮೀಣ ಜನರಿಗೆ ಸರ್ಕಾರದ ಯೋಜನೆಗಳ ಫಲಗಳು ದೊರಕುವುದಿಲ್ಲ. ಆದುದರಿಂದ ಸ್ಥಳೀಯ ಸಂಸ್ಥೆಗಳ ಆಡಳಿತದಲ್ಲಿ ಸರ್ಕಾರಿ ಅಧಿಕಾರಿಗಳ ಪಾತ್ರ ಬಹಳ ಮುಖ್ಯ ವಾಗಿದೆ.

ಮುಖ್ಯವಾಗಿ ಪ್ರಸ್ತುತ ಅಧ್ಯಯನದಲ್ಲಿ ಚುನಾಯಿತ ಮಹಿಳೆಯರಿಗೂ ಮತ್ತು ಸರ್ಕಾರಿ ಅಧಿಕಾರಿಗಳ ಸಂಬಂಧವನ್ನು ಸೂಕ್ಷ್ಮವಾಗಿ ಗುರುತಿಸಲಾಗಿದೆ. ಸರ್ಕಾರಿ ಅಧಿಕಾರಿಗಳು ಯಾವ ರೀತಿಯಾಗಿ ಸದಸ್ಯರಿಗೆ ಸಲಹೆ ಸೂಚನೆಗಳನ್ನು ನೀಡುತ್ತಾರೆ. ಸರ್ಕಾರಿ ಅಧಿಕಾರಿಗಳ ಪ್ರೋತ್ಸಾಹ ಯಾವ ರೀತಿ ಇದೆ? ಈ ತರಹದ ಮುಖ್ಯ ಅಂಶಗಳನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಪ್ರತಿಯೊಂದು ಗ್ರಾಮ ಪಂಚಾಯಿತಿಗೂ ಒಬ್ಬ

ಕಾರ್ಯದರ್ಶಿ ಇರುತ್ತಾನೆ. ಇಲ್ಲಿ ಈ ಕಾರ್ಯದರ್ಶಿಯನ್ನು ಸರ್ಕಾರಿ ಅಧಿಕಾರಿ ಎಂದು ಬಳಸಿಕೊಳ್ಳಲಾಗಿದೆ. ಈ ಕಾರ್ಯದರ್ಶಿಯು ಸರ್ಕಾರದಿಂದ ನೇಮಕವಾಗಿರುತ್ತಾನೆ. ಎಲ್ಲಾ ಲೆಕ್ಕಪತ್ರಗಳ ವಿವರ ಇವರ ಮೂಲಕ ನಡೆಯುತ್ತದೆ. ಕಾರ್ಯದರ್ಶಿಯು ದಕ್ಷ ಆಡಳಿತಗಾರನಾಗಿದ್ದರೆ ಅಲ್ಲಿ ಆಡಳಿತವು ಸುಗಮವಾಗಿರುತ್ತದೆ. ಈ ಎಲ್ಲಾ ಹಿನ್ನೆಲೆಯಲ್ಲಿ ಸರ್ಕಾರಿ ಅಧಿಕಾರಿಗಳ ಪಾತ್ರವನ್ನು ಇಲ್ಲಿ ಗುರುತಿಸಲಾಗಿದೆ. ಚುನಾಯಿತ ಮಹಿಳೆಯರಿಗೆ ಯಾವ ರೀತಿ ಪ್ರೋತ್ಸಾಹ ನೀಡುತ್ತಾರೆ, ಎಷ್ಟರ ಮಟ್ಟಿಗೆ ಸರ್ಕಾರಿ ಅಧಿಕಾರಿಗಳು ಸಲಹೆ ಸೂಚನೆಗಳನ್ನು ಕೊಡುತ್ತಾರೆ ಎಂಬುವ ವಿವರಣೆಯನ್ನು ಕೋಷ್ಟಕ ೪.೪. ರಲ್ಲಿ ನೀಡಲಾಗಿದೆ.

ಕೋಷ್ಟಕ ೪.೪

ಚುನಾಯಿತ ಮಹಿಳೆಯರಿಗೆ ಸರ್ಕಾರಿ ಅಧಿಕಾರಿಗಳು ಸಲಹೆಸೂಚನೆ ಕೊಡುವ ಬಗ್ಗೆ

| ಕ್ರ.ಸಂಖ್ಯೆ | ಸಲಹೆ ಸೂಚನೆ | ಸಂಖ್ಯೆ | ಶೇಕಡ |
|---|---|---|---|
| ೦೧ | ಕೊಡುವುದಿಲ್ಲ | ೦೪ | ೫.೭೨ |
| ೦೨ | ಕೊಡುತ್ತಾರೆ | ೬೬ | ೯೪.೨೮ |
| | ಒಟ್ಟು | ೭೦ | ೧೦೦.೦೦ |

ಕೋಷ್ಟಕ ೪.೪ ನ್ನು ಗಮನಿಸಿದಾಗ ಇಲ್ಲಿ ಹೆಚ್ಚು ಗ್ರಾಮ ಪಂಚಾಯಿತಿಯ ಕಾರ್ಯದರ್ಶಿಗಳು ಸಲಹೆ ಸೂಚನೆಗಳು ಕೊಡುವುದು ಕಂಡು ಬಂದಿದೆ. ಚುನಾಯಿತ ಮಹಿಳೆಯರನ್ನು ಸಂದರ್ಶಿಸಿದಾಗ ಸಾಮಾನ್ಯವಾಗಿ ಹೆಚ್ಚು ಮಾಹಿತಿದಾರರು ಸಲಹೆ ಸೂಚನೆ ಕೊಡುತ್ತಾರೆ ಎಂದು ಮಾಹಿತಿ ನೀಡಿದ್ದಾರೆ. ವಾಸ್ತವ ರೂಪದಲ್ಲಿ ಇದನ್ನು ಗುರುತಿಸುವುದು ಕಷ್ಟ ಎಂದು ಹೇಳಬಹುದು. ಚುನಾಯಿತಿ ಮಹಿಳೆಯರ ಶೇಕಡ ೯೫ರಷ್ಟು ಮಹಿಳೆಯರು ಸರ್ಕಾರಿ ಅಧಿಕಾರಿಗಳು ನಮಗೆ ಸಲಹೆ ಸೂಚನೆಗಳನ್ನು ಕೊಡುತ್ತಾರೆ ಎಂದು ಹೇಳಿದ್ದಾರೆ. ಕಡಿಮೆ ಪ್ರಮಾಣದಲ್ಲಿ ಅಂದರೆ ಶೇಕಡ ೫ರಷ್ಟು ಮಹಿಳೆಯರು ಮಾತ್ರ ಸಲಹೆ ಸೂಚನೆ ಕೊಡುವುದಿಲ್ಲ ಎಂಬ ಮಾಹಿತಿಯನ್ನು ಕೊಟ್ಟಿದ್ದಾರೆ.

## ಸರ್ಕಾರಿ ಅಧಿಕಾರಿಗಳು ಮತ್ತು ಚುನಾಯಿತ ಮಹಿಳೆಯರು

ಈ ಮೊದಲೇ ತಿಳಿಸಿರುವಂತೆ ಚುನಾಯಿತ ಮಹಿಳೆಯರು ಯಾವ ರೀತಿಯಾಗಿ ಸರ್ಕಾರಿ ಅಧಿಕಾರಿಗಳೊಡನೆ ಸಂಬಂಧವನ್ನಿಟ್ಟುಕೊಂಡಿದ್ದಾರೆ? ಯಾವ ರೀತಿಯಾಗಿ ತಮ್ಮ ಕಾರ್ಯ ನಿರ್ವಹಿಸುತ್ತಾರೆ? ಯಾವ ರೀತಿಯಾಗಿ ಸಭೆಯಲ್ಲಿ ಪಾಲ್ಗೊಳ್ಳುತ್ತಾರೆ? ಯಾವ ಯಾವ ರೀತಿಯ ಬೇಡಿಕೆಗಳನ್ನು ಮುಂದಿಡುತ್ತಾರೆ?

ಮೀಸಲಾತಿಯಿಂದಾಗಿ ಮಹಿಳೆಯರಿಗೆ ಏನಾದರೂ ಪ್ರಯೋಜನವಾಗಿದೆಯಾ, ಮುಂತಾದವುಗಳ ಕುರಿತು ಸರ್ಕಾರಿ ಅಧಿಕಾರಿಗಳೊಡನೆ ಸಂದರ್ಶಿಸಿ ಮಾಹಿತಿ ಸಂಗ್ರಹಿಸಿಲಾಯಿತು. ಅದಕ್ಕಾಗಿ ಆಯ್ಕೆ ಮಾಡಿಕೊಂಡ ೧೦ ಗ್ರಾಮ ಪಂಚಾಯಿತಿಗಳಲ್ಲಿ ೧೦ ಕಾರ್ಯದರ್ಶಿಗಳನ್ನು ಸಂದರ್ಶಿಸಲಾಯಿತು.

ಸಂದರ್ಶನ ಮಾಡಿದ ಎಲ್ಲಾ ಕಾರ್ಯದರ್ಶಿಗಳು, ಚುನಾಯಿತ ಮಹಿಳಾ ಸದಸ್ಯರುಗಳು ಹಾಗೂ ತಮ್ಮ ನಡುವೆ ಉತ್ತಮ ಸಂಬಂಧವಿದೆ ಎಂದರು. ಆದರೆ ಮಹಿಳೆಯರಿಗೆ ರಾಜಕೀಯ ಅಧಿಕಾರ ಕೊಡುವುದರ ಕುರಿತು ಅಧಿಕಾರಿಗಳಲ್ಲಿ ಭಿನ್ನಾಭಿಪ್ರಾಯವಿದ್ದು ಅರ್ಧದಷ್ಟು ಅಧಿಕಾರಿಗಳು ಮಹಿಳೆಯರಿಗೆ ರಾಜಕೀಯ ಅಧಿಕಾರ ಕೊಡಬಾರದು ಎಂಬ ಅಭಿಪ್ರಾಯ ತಾಳಿದರು. ಮಹಿಳೆಯರು ಮತ್ತು ಅಧ್ಯಕ್ಷಿಣಿಯರು ಸ್ವತಂತ್ರವಾಗಿ ಅಧಿಕಾರವನ್ನು ಚಲಾಯಿಸುತ್ತಾರಾ ಎಂಬ ಪ್ರಶ್ನೆಗೆ ಹೆಚ್ಚಿನ ಅಧಿಕಾರಿಗಳು ಚುನಾಯಿತ ಮಹಿಳೆಯರು ಸ್ವತಂತ್ರವಾಗಿ ಅಧಿಕಾರವನ್ನು ಚಲಾಯಿಸುವುದಿಲ್ಲ ಎಂದರು. ಈ ಎಲ್ಲಾ ಅಧಿಕಾರಿಗಳು ಮಹಿಳೆಯರ ಶಿಕ್ಷಣದ ಅಗತ್ಯತೆ ಇದೆಯೆಂದು, ಹಾಗೂ ಅಧ್ಯಕ್ಷಿಣಿಯರಾಗಬೇಕಾದರೆ ಕೊನೇ ಪಕ್ಷ ಪ್ರಾಥಮಿಕ ಶಿಕ್ಷಣ ಹೊಂದಿದ ಮಹಿಳೆಯರಾಗಬೇಕೆಂಬ ಒಲವನ್ನು ತೋರಿಸಿದರು.

**ಪುರಷ ಸದಸ್ಯರು ಮತ್ತು ಚುನಾಯಿತ ಮಹಿಳೆಯರು**

ಆಡಳಿತದಲ್ಲಿ ಪುರುಷರ ಪಾತ್ರ ಬಹಳ ಮುಖ್ಯವಾದದ್ದು. ಗ್ರಾಮೀಣ ಪ್ರದೇಶಗಳಲ್ಲಿ ಸಹ ಪುರುಷರು ರಾಜಕೀಯದಲ್ಲಿ ಹೆಚ್ಚು ಭಾಗವಹಿಸುತ್ತಾರೆ. ಯಾವುದೇ ನೀತಿ ನಿರ್ಧಾರಗಳನ್ನು ತೆಗೆದುಕೊಳ್ಳವಲ್ಲಿ ಅವರ ಪಾತ್ರ ಗಮನಾರ್ಹವಾಗಿದೆ. ಆದುವರಿಂದ ಗ್ರಾಮೀಣ ಪ್ರದೇಶದಲ್ಲಿ ಚುನಾಯಿತ ಮಹಿಳಾ ಸದಸ್ಯರ ಮತ್ತು ಪುರುಷ ಸದಸ್ಯರ ಸಂಬಂಧ ಯಾವರೀತಿ ಇದೆ, ಪುರುಷರ ಪ್ರಕಾರ ಮಹಿಳಾ ಮೀಸಲಾತಿ ಬಗೆಗಿನ ಅಭಿಪ್ರಾಯ, ಪಂಚಾಯಿತಿ ಸಭೆಗಳಲ್ಲಿ ಮಹಿಳೆಯರ ಪಾತ್ರ ಈ ವಿಷಯಗಳನ್ನು ಕುರಿತು ಪುರುಷ ಸದಸ್ಯರನ್ನು ಸಂದರ್ಶಿಸುವುದರ ಮೂಲಕ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ.

ಒಟ್ಟು ೧೨ ಗ್ರಾಮ ಪಂಚಾಯಿತಿಯು ಪ್ರತಿಯೊಂದು ಗ್ರಾಮ ಪಂಚಾಯಿತಿಯ ಒಬ್ಬ ಪುರುಷ ಸದಸ್ಯರನ್ನು ಸಂದರ್ಶಿಸಲಾಗಿದೆ.

ಈ ಎಲ್ಲಾ ಸದಸ್ಯರು ತಮ್ಮ ಹಾಗೂ ಮಹಿಳೆಯರೊಡಗಿನ ಸಂಬಂಧ ಚೆನ್ನಾಗಿದೆ ಎಂದರು. ಆದರೆ ಪುರುಷ ಸದಸ್ಯರು ಚುನಾಯಿತ ಮಹಿಳೆಯರ ಕಾರ್ಯ ವೈಖರಿ, ಚರ್ಚೆಯಲ್ಲಿ ಭಾಗವಹಿಸುವಿಕೆ ಕುರಿತು ತೃಪ್ತಿಕರ ಉತ್ತರ ನೀಡಲಿಲ್ಲ. ಹೆಚ್ಚಿನ ಸಂದರ್ಭದಲ್ಲಿ ಮಹಿಳೆಯರು, ಅಧ್ಯಕ್ಷಿಣಿಯು ಸೇರಿದಂತೆ, ಪುರುಷ ಸದಸ್ಯರು ಹೇಳಿದಂತೆ ಕೇಳುತ್ತಾರೆ ಎಂಬುದಾಗಿ ಹೇಳಿದರು ಹಾಗೂ ಈ ಮಹಿಳೆಯರು ಇದುವರೆಗೂ ಯಾವುದೇ ರೀತಿಯ ಸಾಮಾಜಿಕ ಕಾರ್ಯಗಳನ್ನು ಸಮಾಧಾನಕರವಾಗಿ ನಡೆಸಿಲ್ಲ ಎಂದರು.

ಊರಿನ ಗ್ರಾಮಸ್ಥರು ಮತ್ತು ಚುನಾಯಿತ ಮಹಿಳೆಯರು

ಪಂಚಾಯತ್ ರಾಜ್ ಸಂಸ್ಥೆಗಳ ಮುಖ್ಯ ಉದ್ದೇಶವೇ ಜನರಿಗೆ ಅಧಿಕಾರವನ್ನು ನೀಡುವುದು. ಜನರೇ ತಮ್ಮ ಕುರಿತು ನಿರ್ಣಯ ತೆಗೆದುಕೊಳ್ಳುವುದು. ಗ್ರಾಮಗಳ ಅಭಿವೃದ್ಧಿಯ, ಪಂಚಾಯತ್ ರಾಜ್ ಸಂಸ್ಥೆಯ ಮುಖ್ಯ ಗುರಿಯಾಗಿದ್ದು, ಗ್ರಾಮಸ್ಥರಿಗೆ ಈ ಅಭಿವೃದ್ಧಿಯ ಫಲಗಳನ್ನು ಪಡೆಯುವಲ್ಲಿ ಈ ಸಂಸ್ಥೆಗಳು ಕಾರ್ಯ ನಿರ್ವಹಿಸಬೇಕು. ಲಿಂಗ ಭೇದವಿಲ್ಲದೆ ಜನರು ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಭಾಗವಹಿಸಬೇಕು.

ಈ ಹಿನ್ನೆಲೆಯಿಟ್ಟುಕೊಂಡು ಯಾವ ರೀತಿಯಾಗಿ ಚುನಾಯಿತ ಮಹಿಳೆಯರ ಕಾರ್ಯ ಗ್ರಾಮಸ್ಥರಿಗೆ ಉಪಯೋಗವಾಗಿದೆ ಎಂದು ೧೨ ಗ್ರಾಮ ಪಂಚಾಯತಿಯ ೧೨ ಗ್ರಾಮಸ್ಥರಿಂದ ಅಭಿಪ್ರಾಯ ಸಂಗ್ರಹಿಸಲಾಗಿದೆ. ಅವರ ಪ್ರಕಾರ ಗ್ರಾಮಪಂಚಾಯಿತಿಯು ಅನೇಕ ಪ್ರಗತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ಶೌಚಾಲಯದ ನಿರ್ಮಾಣ, ಕುಡಿಯುವ ನೀರು, ನೈರ್ಮಲ್ಯೀಕರಣದ ವ್ಯವಸ್ಥೆಯನ್ನು ಪೂರೈಸಿದ್ದಾರೆಂದರು. ಆದರೆ ಈ ಕಾರ್ಯಕ್ರಮದಲ್ಲಿ ಚುನಾಯಿತ ಮಹಿಳೆಯರ ಪಾತ್ರವಿಲ್ಲ ಎಂದ ಗ್ರಾಮಸ್ಥರು, ಪುರುಷ ಹೇಳಿದ ಹಾಗೆ ಚುನಾಯಿತ ಮಹಿಳೆಯರು ಕಾರ್ಯ ನಿರ್ವಹಿಸುತ್ತಾರೆ ಎಂಬುದಾಗಿ ಹೇಳಿದರು. ಈ ಮಹಿಳೆಯರು ಬೇಡಿಕೆಗಳನ್ನಾಗಲಿ, ಮನೆ ಮನೆಗೆ ಭೇಟಿಯಾಗಲಿ, ಸ್ವಂತ ನಿರ್ಧಾರವನ್ನಾಗಲಿ ತೆಗೆದುಕೊಳ್ಳಲು ಅಶಕ್ತರಾಗಿದ್ದಾರೆ ಎಂದು ಊರಿನ ಗ್ರಾಮಸ್ಥರು ಅಂದರು. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಸರ್ಕಾರಿ ಅಧಿಕಾರಿಗಳಾಗಲಿ, ಪುರುಷ ಸದಸ್ಯರಾಗಲಿ ಅಥವಾ ಊರಿನ ಗ್ರಾಮಸ್ಥರಾಗಲಿ ಯಾವುದೇ ರೀತಿಯ ಸಕಾರಾತ್ಮಕ ಅಭಿಪ್ರಾಯವನ್ನು ಚುನಾಯಿತ ಮಹಿಳೆಯರ ಪರ ಹೇಳಲಿಲ್ಲ. ಆದ್ದರಿಂದ ಇಂದಿಗೂ ಮಹಿಳೆಯರ ರಾಜಕೀಯದ ಪ್ರವೇಶ ಕುರಿತು ಪುರುಷರಲ್ಲಿ ಅಸಮಾಧಾನ ಇದೆ ಎಂದು ನಮ್ಮ ಅಧ್ಯಯನದ ಮೂಲಕ ಕಂಡುಕೊಳ್ಳಬಹುದು.

## ಅಧ್ಯಾಯ ೫

# ಚುನಾಯಿತ ಮಹಿಳೆಯರ ಆಯ್ಕೆ ಮತ್ತು ಕಾರ್ಯವೈಖರಿ

ಮಹಿಳೆಯರಿಗೆ ರಾಜಕೀಯದ ಬಗ್ಗೆ ಒಂದು ರೀತಿಯ ಔದಾಸೀನ್ಯ ಮನೋಭಾವನೆ ಇರುವುದು ಪ್ರಾಚೀನ ಕಾಲದಿಂದಲೂ ನಮಗೆ ಕಂಡು ಬರುತ್ತಿದೆ. ರಾಜಕೀಯವು ಮಹಿಳೆಯರಿಗಲ್ಲ ಅದು ಪುರುಷರಿಗೆ ಮಾತ್ರ ಸೀಮಿತವಾದದ್ದು ಎಂಬ ಕಲ್ಪನೆ ಜನರಲ್ಲಿ ಬೇರೂರಿಬಿಟ್ಟಿದೆ, ಮತ್ತು ಅಭಿಪ್ರಾಯ ಹೆಚ್ಚು ಪ್ರಚಲಿತದಲ್ಲಿದೆ. ಈ ಔದಾಸೀನ್ಯ ಮನೋಭಾವನೆಗೆ ಎರಡು ಪ್ರಮುಖ ಕಾರಣಗಳನ್ನು ಗುರುತಿಸಬಹುದು. ೧. ಮನೆಗೆಲಸದ ಹೊರ ೨. ಮಕ್ಕಳ ಪಾಲನೆ/ಪೋಷಣೆ, ಹೊಲಗದ್ದೆಗಳ ಕೆಲಸಗಳ ಜೊತೆಗೆ ರಾಜಕೀಯ ಜವಾಬ್ದಾರಿಗಳನ್ನು ನಿರ್ವಹಿಸುವುದು ತುಂಬಾ ಕಷ್ಟದ ಕೆಲಸವಾಗುತ್ತದೆ. "ರಾಜಕೀಯ ಇಂದು ಒಂದು ರೀತಿಯ ವೃತ್ತಿಯಾಗಿದೆ". ಮಹಿಳೆಯರು ರಾಜಕೀಯಕ್ಕೆ ಇಳಿಯುವುದೆಂದರೆ ಮನೆಗೆಲಸದ ಜವಾಬ್ದಾರಿಯನ್ನು ನಿರ್ಲಕ್ಷಿಸಿ ಸಂಪೂರ್ಣ ಸಮಯವನ್ನು ರಾಜಕೀಯಕ್ಕೆ ಮೀಸಲಿಡಬೇಕಾಗುತ್ತದೆ (ಮುಖರ್ಜಿ, ೧೯೯೪).

ಇಂದು ಭಾರತದ ರಾಜಕೀಯ ಭೂಪಟದಲ್ಲಿ ಮಹಿಳೆಯರು ಪ್ರಧಾನಮಂತ್ರಿ, ಮುಖ್ಯಮಂತ್ರಿ, ಸಂಪುಟ ಸಚಿವರಾಗಿ ಮತ್ತು ರಾಜ್ಯಪಾಲರಾಗಿ ಅಧಿಕಾರದ ಅನುಭವ ಪಡೆದಿದ್ದಾರೆ. ಮಹಿಳೆಯರ ಯೋಗಕ್ಷೇಮವನ್ನು ಪ್ರೋತ್ಸಾಹಿಸುವುದು ಹಾಗೂ ರಾಷ್ಟ್ರಾಡಳಿತದ ಎಲ್ಲಾ ಸ್ತರಗಳಲ್ಲಿ ಮಹಿಳೆಯರಿಗೆ ಸಮಾನ ಪಾಲುಗಾರಿಕೆ ನೀಡುವುದು ಸಂವಿಧಾನಾತ್ಮಕ ವಿಧಾನವಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಯಾವ ಕ್ಷೇತ್ರಗಳಲ್ಲಿಯಾ ಮಹಿಳೆಯರನ್ನು ಮುಂದಕ್ಕೆ ಬಿಡುವ ಪ್ರಯತ್ನಗಳು ನಡೆಯಲೇ ಇಲ್ಲ. ಅದರಲ್ಲಿಯೂ ರಾಜಕೀಯ ಕ್ಷೇತ್ರದಲ್ಲಿ ಅವರ ಸುಳಿವು ಇಲ್ಲದಂತೆ ನೋಡಿಕೊಂಡು ಬರಲಾಗಿದೆ. ಮಹಿಳೆಯು ದೈಹಿಕವಾಗಿ ದುರ್ಬಲವಾಗಿದ್ದರಿಂದ ರಾಜಕೀಯ ಪ್ರವೇಶ ಮಾಡಿ ಅಲ್ಲಿ ಎದುರಾಗುವ ಸಮಸ್ಯೆಗಳನ್ನು, ಕಷ್ಟ ಕಾರ್ಪಣ್ಯಗಳನ್ನು ಪರಿಹರಿಸುವ ಸಾಮರ್ಥ್ಯ ಇಲ್ಲದವಳು ಎಂಬ ಭಾವನೆ ವ್ಯಾಪಕವಾಗಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಗೌರವಯುತ ಸ್ಥಾನಮಾನವನ್ನು ಆಕೆ ಹೊಂದಿದ್ದಾಳೆ. ಒಂದು ವೇಳೆ ರಾಜಕೀಯ ಪ್ರವೇಶ ಮಾಡಿದರೆ ದಿನನಿತ್ಯದ ಕೌಟುಂಬಿಕ ಅಥವಾ ಸಾಲಸುಂಕ ಜೀವನಕ್ಕೆ ಅಡೆತಡೆಯೂ ನಿಲ್ಲುತ್ತದೆ. ಈ ರೀತಿಯಾಗಿ ಮಹಿಳೆ ಮನೆಗೆ ಮಾತ್ರ ಸೀಮಿತಳು ಎಂಬುದು ಸಾಮಾನ್ಯ ನಂಬಿಕೆಯಾಗಿದೆ. ಇತ್ತೀಚಿನ ದಿನಗಳಲ್ಲಿ ರಾಜಕೀಯದಲ್ಲಿ ಹಣವು ಪ್ರಬಲ ಪಾತ್ರವನ್ನುವಹಿಸುತ್ತದೆ. ಲಂಚ, ಭ್ರಷ್ಟಾಚಾರ, ರಾಜಕೀಯದ ಅನಿವಾರ್ಯ ಅಂಶಗಳಾಗಿದೆ. ಇದನ್ನು ಬಹುಪಾಲು ಮಹಿಳೆಯರು ಒಪ್ಪಿಕೊಳ್ಳುತ್ತಾರೆ. ರಾಜಕೀಯ ಮೌಲ್ಯಗಳು ಇಂದು ಬದಲಾವಣೆಯಾಗಿದೆ. ಇಂದು ರಾಜಕೀಯ ಸಂಪೂರ್ಣವಾಗಿ ಹಣದ ಮೇಲೆ ನಿಂತಿದೆ. (ಸ್ವರ್ಣ ಪ್ರಭಾಕರ, ೧೯೯೫). ಮಹಿಳೆಯರು ರಾಜಕೀಯ ಸೇರದಿರಲು ಅನಕ್ಷರತೆ, ಅಜ್ಞಾನ, ಆಧುನಿಕ ರಾಜಕೀಯದ ಬೆಳವಣಿಗೆಯ ಮಾಹಿತಿ ಇಲ್ಲದಿರುವುದು ಇಂದಿನ ರಾಜಕೀಯ ಸ್ವರೂಪವಾಗಿದೆ. (ಕುಮಾರ್, ೧೯೯೪).

ಮಹಿಳೆಯರಿಗೆ ಗಂಡಸರಂತೆ ದೈಹಿಕ ಬಲಾಢ್ಯತೆಯ ವಿರುದ್ಧ ಸೆಣಸುವ ಶಕ್ತಿಯಿಲ್ಲ. ಜನರಕ್ಕೆಗೆ ನೀಡುವ ಅಧಿಕಾರ ೫೦ರ ದಶಕದಲ್ಲಿ ಪ್ರಾರಂಭವಾಗಿದ್ದರೆ ಅದು ಉತ್ತಮ ಪರಿಣಾಮ ನೀಡುತ್ತಿತ್ತು. ಆದರ ಇಂದು ರಾಜಕೀಯ ಅಪರಾಧೀಕರಣ ಹಾಗೂ ಅಪರಾಧಿಗಳನ್ನು ರಾಜಕೀಯಕರಣಗೊಳಿಸುವ ಹಂತವನ್ನು ತಲುಪಿರುವುದರಿಂದ ಪಂಚಾಯತ್ ರಾಜ್ ಸಂಸ್ಥೆಗಳು ಸಹ ಈ ಬಲೆಯಲ್ಲಿ ಸುಲಭವಾಗಿ ಬೀಳುವ ಅಪಾಯವು ಹೆಚ್ಚಿದೆಯೆಂದು ಪ್ರಮುಖ ಸಮಾಜವಾದಿ ನಾಯಕ ಮಧುಲಿಮಯೆ ಅವರು ಭಾವಿಸಿದ್ದಾರೆ. ಮಹಿಳೆಯರಿಗೇಕೆ ರಾಜಕೀಯ ಎಂಬ ವಾದ ಚರ್ಚೆಯಲ್ಲಿದೆ. ಮತದಾನದ ಹಂತದವರಗೂ ಪುರುಷನಷ್ಟೇ, ಪ್ರಾಧಾನ್ಯತೆ ಪಡೆದಿರುವ ಮಹಿಳೆಯರು ಮೇಲೆ ಹೋದಂತೆಲ್ಲಾ ನೇಪಥ್ಯಕ್ಕೆ ಸರಿಸಲ್ಪಡುತ್ತಿದ್ದಾರೆ.

ಪ್ರಸಕ್ತ ಇರುವ ಸಾಮಾಜಿಕ, ಕೌಟುಂಬಿಕ ಚೌಕಟ್ಟಿನಲ್ಲಿ ಬಂಧಿತವಾಗಿರುವ ಹಿನ್ನೆಲೆಯಲ್ಲಿ ರಾಜಕೀಯ ಕ್ಷೇತ್ರವಲ್ಲಿ ಹೆಚ್ಚು ಸಂಖ್ಯೆಯಲ್ಲಿ ಮಹಿಳೆಯರು ಕಂಡು ಬರುತ್ತಿಲ್ಲ. ಮಹಿಳೆಯರು ಪುರುಷ ಪ್ರಧಾನ ಮೌಲ್ಯಗಳಲ್ಲಿ ಸಿಕ್ಕಿಕೊಂಡು ಎರಡನೆ ದರ್ಜೆಯ ಪ್ರಜೆಯಾಗಿ ಪರಿಗಣಿಸಲ್ಪಟ್ಟಿದ್ದಾಳೆ. ಈ ಪರಿಸ್ಥಿತಿ ಬದಲಾಗಬೇಕಾದರೆ ಎಲ್ಲಾ ಹಂತಗಳಲ್ಲಿಯೂ ಸ್ತ್ರೀ ಪುರುಷರು ಸಮಾನವಾಗಿ ಪಾಲ್ಗೊಳ್ಳಬೇಕು. ನೀತಿ ನಿರೂಪಣೆಯಲ್ಲಿ, ಯೋಜನೆಗಳ ಜಾರಿಯಲ್ಲಿ, ತೀರ್ಮಾನ ತೆಗೆದುಕೊಳ್ಳುವ ಸ್ಥಾನಗಳಲ್ಲಿ ಮಹಿಳೆಯರಿಗೆ ಅವಕಾಶಗಳು ಸಿಗಬೇಕು. ಇಂಥಹ ವಾತಾವರಣ ನಿರ್ಮಾಣಕ್ಕೆ ಮಹಿಳಾ ಚಳುವಳಿ ನಡೆಸಿದ ಹೋರಾಟಕ್ಕೆ ಪ್ರತಿಯಾಗಿ ಹಲವಾರು ವರ್ಷಗಳಿಂದ ಹಲವಾರು ರೂಪಗಳಲ್ಲಿ ಪ್ರಸ್ತಾಪನೆಯಲ್ಲಿದ್ದ "ರಾಜಕೀಯದಲ್ಲಿ ಮಹಿಳಾ ಪ್ರಾತಿನಿಧ್ಯ" ಪ್ರಯತ್ನಗಳು ಶೇಕಡಾ ೩೩ರಷ್ಟು ಮೀಸಲಾತಿ ಮಸೂದೆಯ ಮಂಡನೆಯವರೆಗೆ ಬಂದು ನಿಂತಿದೆ.

೧೯೯೩ರಲ್ಲಿನ ೭೩ ಮತ್ತು ೭೪ನೇ ತಿದ್ದುಪಡಿಗಳ ಅಂಗೀಕಾರವಾಗಿ ಸ್ಥಳೀಯ ಚುನಾವಣೆಗಳಲ್ಲಿ ಮಹಿಳೆಯರಿಗೆ ಪ್ರಾತಿನಿಧ್ಯ ಸಿಗುವಂತಾಯಿತು. ಎಲ್ಲಾ ಸಮಿತಿಗಳ ವರದಿಗಳು ಒಟ್ಟಾರೆಯಾಗಿ ಮಹಿಳೆಯರಿಗೆ ಪ್ರಾತಿನಿಧ್ಯ ಕೊಡುವ ನಿಟ್ಟಿನಲ್ಲಿ ಸ್ವಾಗತಾರ್ಹವಾದ ನಿಲುವುಗಳನ್ನು ತೆಗೆದುಕೊಂಡಿದ್ದಾವೆ. ಕರ್ನಾಟಕದಲ್ಲಿ ೧೯೯೩ರ ಡಿಸೆಂಬರ್ ತಿಂಗಳಲ್ಲಿ ಸುಮಾರು ೩೫,೦೦೦ ಮಹಿಳೆಯರು ಗ್ರಾಮ ಪಂಚಾಯಿತಿಗೆ ಆಯ್ಕೆಯಾಗಿದ್ದಾರೆ. ಮೀಸಲಾತಿಗಿಂತ ಹೆಚ್ಚು ಮಹಿಳೆಯರು ರಾಜಕೀಯದಲ್ಲಿ ಭಾಗವಹಿಸಿದ್ದಾರೆ.

ಈ ಮೀಸಲಾತಿ ಸೌಲಭ್ಯವು ಎಷ್ಟರ ಮಟ್ಟಿಗೆ ಮಹಿಳೆಯರ ಸ್ಥಾನಮಾನವನ್ನು ಬದಲಾಯಿಸಿದೆ? ಮಹಿಳೆಯರಿಗೆ ರಾಜಕೀಯವನ್ನು ಭಾಗವಹಿಸಲು ಆಸಕ್ತಿ ಇದೆಯೇ? ಯಾವ ರೀತಿಯಾಗಿ ಆಯ್ಕೆಯಾಗಿದ್ದಾರೆ? ಮಹಿಳೆಯರ ರಾಜಕೀಯ ಪ್ರವೇಶದಿಂದ ಕುಟುಂಬದ ಮೇಲೆ ಯಾವ ರೀತಿಯ ಪರಿಣಾಮ ಬೀರಿದೆ? ಯಾವ ರೀತಿ ಅಭಿವೃದ್ಧಿ ಕಾರ್ಯಗಳನ್ನು ಮಹಿಳೆಯರು ಕೈಗೊಂಡಿದ್ದಾರೆ? ಯಾವ ಬೇಡಿಕೆಗಳನ್ನು ಪೂರೈಸಿದ್ದಾರೆ ಎಂಬ ವಿಷಯಗಳನ್ನು ಕುರಿತು ಮುಂದೆ ಚರ್ಚಿಸಲಾಗಿದೆ.

**ಚುನಾಯಿತ ಮಹಿಳಾ ಮಾಹಿತಿದಾರರ ರಾಜಕೀಯ ಆಸಕ್ತಿ**

ರಾಜಕೀಯದಲ್ಲಿ ಮಹಿಳೆಯರಿಗೆ ಅವಕಾಶ ಕಡಿಮೆ. ಹಾಗೂ ತಿಳಿದೂ ತಿಳಿಯದೆಯೂ ನಮ್ಮ ದೇಶದ ಎಲ್ಲಾ ವರ್ಗದ ಮಹಿಳೆಯರು ರಾಜಕೀಯದಿಂದ ದೂರವಿದ್ದಾರೆ. ಇದಕ್ಕಾಗಿಯೆ ರಾಜಕೀಯದಲ್ಲಿ ಮೀಸಲಾತಿ ಸೌಲಭ್ಯ ನೀಡಲಾಯಿತು. ಆದ್ದರಿಂದ ಎಲ್ಲಾ ವರ್ಗ-ಜಾತಿಯ ಮಹಿಳೆಯರು ರಾಜಕೀಯದಲ್ಲಿ ಪಾಲ್ಗೊಳ್ಳುವಂತಾಯಿತು. ತಮ್ಮ ಸಮಸ್ಯೆಗಳನ್ನು ತಾವೇ ಚರ್ಚಿಸಿ ಪರಿಹಾರ ಕಂಡುಕೊಳ್ಳುವ ಅವಕಾಶ ದೊರೆಯುವಂತಾಯಿತು.

ಆದರೆ ಬಹಳ ಸಂಖ್ಯೆಯಲ್ಲಿ ಮಹಿಳೆಯರು ಬೇರೆಯವರ ಒತ್ತಾಯಕ್ಕೆ ಮಣಿದು ರಾಜಕೀಯ ಪ್ರವೇಶ ಮಾಡಿದರು. ಅವರ ಒಪ್ಪಿಗೆ ಇಲ್ಲದೆ ಅವರ ಪರವಾಗಿ ಚುನಾವಣೆಯಲ್ಲಿ ಭಾಗವಹಿಸುವವರನ್ನು, ಅನುಚರರನ್ನು ನಾವು ಕಾಣಬಹುದು. ಈ ಹಿನ್ನೆಲೆಯಲ್ಲಿ ನಮ್ಮ ಅಧ್ಯಯನದ ಚುನಾಯಿತ ಮಹಿಳೆಯರು ಒತ್ತಾಯಕ್ಕಾಗಿ ಅಥವಾ ಸ್ವ ಇಚ್ಛೆಯಿಂದ ರಾಜಕೀಯದಲ್ಲಿ ಭಾಗವಹಿಸಿದರು ಎಂದು ತಿಳಿಯುವ ಪ್ರಯತ್ನ ಮಾಡಲಾಗಿದೆ. ಕೋಷ್ಟಕ ೫.೧ರಲ್ಲಿ ತೋರಿಸಿರುವಂತೆ ನಮ್ಮ ಅಧ್ಯಯನದ ಶೇಕಡ ೮೪.೨೯ ಚುನಾಯಿತ ಮಹಿಳಾ ಮಾಹಿತಿದಾರರು ತಮ್ಮ ಸ್ವ ಇಚ್ಛೆಯಿಂದಲ್ಲದೆ ಬೇರೆಯವರ ಒತ್ತಾಯಕ್ಕೆ ಚುನಾವಣೆಗೆ ನಿಲ್ಲಬೇಕಾಯಿತು ಎಂದರು. ಕೇವಲ ಶೇಕಡ ೧೫.೭೧ ರಷ್ಟು ಮಹಿಳೆಯರು ತಾವು ಸ್ವಇಚ್ಛೆಯಿಂದ ರಾಜಕೀಯ ಪ್ರವೇಶ ಮಾಡಿದ್ದೇವೆ ಎಂಬುದಾಗಿ ಹೇಳಿದರು.

ಕೋಷ್ಟಕ ೫.೧
ರಾಜಕೀಯದಲ್ಲಿ ಭಾಗವಹಿಸಿದ್ದು

| ಕ್ರ.ಸಂಖ್ಯೆ | ಭಾಗವಹಿಸುವಿಕೆ | ಸಂಖ್ಯೆ | ಶೇಕಡ |
|---|---|---|---|
| ೦೧ | ಸ್ವ ಇಚ್ಛೆಯಿಂದ | ೧೧ | ೧೫.೭೧ |
| ೦೨ | ಸ್ವ ಇಚ್ಛೆಯಿಂದಲ್ಲ | ೫೯ | ೮೪.೨೯ |
| | ಒಟ್ಟು | ೭೦ | ೧೦೦.೦೦ |

ಕೋಷ್ಟಕ ೫.೨

ಚುನಾಯಿತ ಮಹಿಳೆಯರು ಯಾರ ಒತ್ತಾಯಕ್ಕಾಗಿ ಚುನಾವಣೆಯಲ್ಲಿ ಭಾಗವಹಿಸಿದ್ದು.

| ಕ್ರ.ಸಂಖ್ಯೆ | ಒತ್ತಾಯ | ಸಂಖ್ಯೆ | ಶೇಕಡ |
|---|---|---|---|
| ೦೧ | ಗಂಡನಿಂದ | ೩೪ | ೪೮.೫೭ |
| ೦೨ | ಸಂಬಂಧಿಕರಿಂದ | ೧೬ | ೨೨.೮೬ |
| ೦೩ | ಊರಿನ ಪ್ರಮುಖರಿಂದ | ೯ | ೧೨.೮೬ |
| ೦೪ | ಅನ್ವಯಿಸುವುದಿಲ್ಲ | ೧೧ | ೧೫.೭೧ |
| | ಒಟ್ಟು | ೭೦ | ೧೦೦.೦೦ |

ಕೋಷ್ಟಕ ೫.೨ ಪ್ರಕಾರ ಹೆಚ್ಚಿನ ಮಹಿಳೆಯರು ಒತ್ತಾಯಕ್ಕೋಸ್ಕರ ಚುನಾವಣೆಯಲ್ಲಿ ಭಾಗವಹಿಸಿದ್ದು ಎಂದು ಸ್ಪಷ್ಟವಾಗುತ್ತದೆ. ಸುಮಾರು ಅರ್ಧದಷ್ಟು ಮಹಿಳೆಯರು ಗಂಡನ ಇಚ್ಛೆಗೋಸ್ಕರ ಚುನಾವಣೆಯಲ್ಲಿ ಸ್ಪರ್ಧಿಸಿದ್ದಾರೆ. ಇನ್ನುಳಿದ ಶೇಕಡ ೩೫ರಷ್ಟು ಮಹಿಳೆಯರು, ಸಂಬಂಧಿಕರಿಂದ ಮತ್ತು ಊರಿನ ಪ್ರಮುಖ ವ್ಯಕ್ತಿಗಳ ಒತ್ತಾಯಕ್ಕಾಗಿ ಚುನಾವಣೆಗೆ ಸ್ಪರ್ಧಿಸಿದ್ದಾರೆ ಎಂದು ಹೇಳಿದರು. ಅನಕ್ಷರತೆ, ರಾಜಕೀಯ ತಿಳುವಳಿಕೆ ಇಲ್ಲದಿರುವುದು, ಭಯ ಹಾಗೂ ಬಡತನದಿಂದಾಗಿ ಮಹಿಳೆಯರು ಬೇರೆಯವರ ಒತ್ತಾಯಕ್ಕೋಸ್ಕರ ರಾಜಕೀಯ ಪ್ರವೇಶ ಮಾಡಿದ್ದಾರೆ. ತಮ್ಮ ಸ್ವ ಇಚ್ಛೆಯಿಂದ ಚುನಾವಣೆ ಸ್ಪರ್ಧಿಸಲು ಮಹಿಳೆಯರು ಹಿಂಜರಿಯುತ್ತಾರೆ.



**ಮಹಿಳೆಯರ ಆಯ್ಕೆಯ ರೀತಿ**

ಈ ಹಿಂದೆ ತಿಳಿಸಿರುವಂತೆ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಿನಮಹಿಳೆಯರು ಅನ್ಯರ ಒತ್ತಾಯದ ಮೇರೆಗೆ ರಾಜಕೀಯ ಪ್ರವೇಶ ಮಾಡುವುದರಿಂದ ಚುನಾವಣೆಯಲ್ಲಿ ಭಾಗವಹಿಸುವ ಮಹಿಳೆಯರ ಸಂಖ್ಯೆ ಅತ್ಯಂತ ವಿರಳವಾಗಿರುತ್ತದೆ. ಇದರಿಂದಾಗಿ ಹೆಚ್ಚಿನ ಸಂದರ್ಭಗಳಲ್ಲಿ ಮಹಿಳಾ ಸ್ಪಧಿಗಳಿಗೆ ಪ್ರತಿಸ್ಪರ್ಧಿಗಳೇ ಇಲ್ಲದಿರುವುದರಿಂದ ಮಹಿಳೆಯರು ಚುನಾವಣೆಯಲ್ಲಿ ಅವಿರೋಧವಾಗಿ ಆಯ್ಕೆಯಾಗುವ ಸಂದರ್ಭ ಹೆಚ್ಚು. ಈ ಹಿನ್ನೆಲೆಯನ್ನಿಟ್ಟುಕೊಂಡು ನಮ್ಮ ಅಧ್ಯಯನದ ಮಹಿಳೆಯರು ಚುನಾಯಿತರಾದ ರೀತಿ ನೋಡಿದರೆ ಸುಮಾರು ಶೇಕಡ ೭೦ ರಷ್ಟು ಮಹಿಳೆಯರು ಅವಿರೋಧವಾಗಿ ಆಯ್ಕೆಯಾಗಿದ್ದಾರೆ. ಈ ಅಂಶವು ರಾಜಕೀಯದ ಬಗ್ಗೆ ಮಹಿಳೆಯರ ಮನೋಭಾವನೆ ತಿಳಿಸುತ್ತದೆ. (ನೋಡಿರಿ, ಕೋಷ್ಟಕ ೫.೩)

ಕೋಷ್ಟಕ ೫.೩

ಮಹಿಳಾ ಮಾಹಿತಿದಾರರು ಚುನಾವಣೆಯಲ್ಲಿ ಆಯ್ಕೆಯಾದ ವಿಧಾನ

| ಕ್ರ.ಸಂಖ್ಯೆ. | ಆಯ್ಕ ವಿಧಾನ | ಸಂಖ್ಯೆ | ಶೇಕಡ |
|---|---|---|---|
| ೦೧ | ಅವಿರೋಧವಾಗಿ ಆಯ್ಕೆ | ೪೭ | ೬೭.೧೪ |
| ೦೨ | ಚುನಾವಣೆಯ ಮೂಲಕ | ೨೩ | ೩೨.೮೬ |
| | ಒಟ್ಟು | ೭೦ | ೧೦೦.೦೦ |

ಅವಿರೋಧವಾಗಿ ಆಯ್ಕೆಯಾದರೆ ರಾಜಕೀಯ ದ್ವೇಷದ ಪ್ರಮಾಣ ಕಡಿಮೆ ಎಂದು ಹೇಳಬಹುದು. ರಾಜಕೀಯದ ಆರಂಭಿಕ ಹಂತದಲ್ಲಿರುವ ಮಹಿಳೆಯರಿಗೆ ಇದೊಂದು ವರದಾನ ಎಂದರೆ ತಪ್ಪಾಗಲಾರದು. ರಾಜಕೀಯದ ದ್ವೇಷದಿಂದ ಮುಕ್ತರಾಗುವ ಈ ಮಹಿಳೆಯರು ಹೆಚ್ಚಾಗಿ ಅಭಿವೃದ್ಧಿ ಕಾರ್ಯಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಡಬಹುದು. ಎಲ್ಲಿ ಜಾತಿ ಪದ್ಧತಿ ಕಲಹಗಳು ತೀವ್ರವಾಗಿದೆಯೊ ಅಲ್ಲಿ ಚುನಾವಣೆಗಳು ನಡೆಯುತ್ತವೆ. ಗ್ರಾಮೀಣ ಪ್ರದೇಶದಲ್ಲಿ ಅವಿರೋಧವಾಗಿ ಆಯ್ಕೆಯಾಗಲು ಮೀಸಲಾತಿಯೂ ಪ್ರಬಲ ಕಾರಣವೆನ್ನಬಹುದು. ಏಕೆಂದರೆ ಕೋಷ್ಟಕ ೫.೪ದ ಪ್ರಕಾರ ಸಾಮಾನ್ಯ ವರ್ಗದಲ್ಲಿ ಚುನಾಯಿತರಾದವರು (ಶೇಕಡ ೪೬.೬೫) ಅವಿರೋಧವಾಗಿ ಚುನಾಯಿತರಾದವರು (ಶೇಕಡ ೫೩.೩೩) ಶೇಕಡ ಬಹಳಷ್ಟು ಮಟ್ಟಿಗೆ ಸರಿಸಮಾನವಾಗಿದೆ. ಆದರೆ ಹಿಂದುಳಿದ ವರ್ಗ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಲ್ಲಿ, ಅವಿರೋಧವಾಗಿ ಆಯ್ಕೆಯಾದವರ ಸಂಖ್ಯೆಗೂ ಚುನಾವಣೆಯ ಮೂಲಕ ಆಯ್ಕೆಯಾದ ಸಂಖ್ಯೆಗೂ ಅಜಗಜಾಂತರ ವ್ಯತ್ಯಾಸವಿದೆ. ಪ್ರಸ್ತುತ ಅಧ್ಯಯನದ ಶೇಕಡ ೭೪.೦೭ ಹಿಂದುಳಿದ ವರ್ಗ. ಶೇಕಡ ೬೯.೨೩ ಪರಿಶಿಷ್ಟ ಪಂಗಡ, ಶೇಕಡ ೬೬.೨೩, ಮಹಿಳೆಯರು ಅವಿರೋಧವಾಗಿ ಆಯ್ಕೆಯಾಗಿದ್ದಾರೆ. (ವಿವರವನ್ನು ಕೋಷ್ಟಕ ೫.೪ರಲ್ಲಿ ನೀಡಲಾಗಿದೆ.)

ಕೋಷ್ಟಕ ೫.೪.

ಚುನಾಯಿತ ಮಹಿಳೆಯರ ಜಾತಿವಾರು ಆಯ್ಕೆಯ ವಿಂಗಡನೆ

| ಕ್ರ.ಸಂ. | ಜಾತಿ/ವರ್ಗ | ಅವಿರೋಧವಾಗಿ ಆಯ್ಕೆ | ಚುನಾವಣೆಯ ಮೂಲಕ | ಒಟ್ಟು |
|---|---|---|---|---|
| ೦೧ | ಪರಿಶಿಷ್ಟ ಜಾತಿ | ೧೦ (೬೬.೬೬) | ೦೫ (೩೩.೩೪) | ೧೫ (೧೦೦.೦೦) |
| ೦೨ | ಪರಿಶಿಷ್ಟ ಪಂಗಡ | ೦೯ (೬೯.೨೩) | ೦೪ (೩೦.೭೭) | ೧೩ (೧೦೦.೦೦) |
| ೦೩ | ಹಿಂದುಳಿದ ವರ್ಗ | ೨೦ (೭೪.೦೭) | ೦೭ (೨೫.೯೩) | ೨೭ (೧೦೦.೦೦) |
| ೦೪ | ಸಾಮಾನ್ಯ ವರ್ಗ | ೦೮ (೫೩.೩೩) | ೦೭ (೪೬.೬೭) | ೧೫ (೧೦೦.೦೦) |
| | ಒಟ್ಟು | ೪೭ (೬೭.೧೪) | ೨೩ (೩೨.೮೬) | ೭೦ (೧೦೦.೦೦) |

## ಚುನಾಯಿತ ಮಹಿಳೆಯರ ಸಾಮಾಜಿಕ ಸ್ಥಾನಮಾನ

ರಾಜಕೀಯವು ಇತ್ತೀಚಿನ ದಿನಗಳಲ್ಲಿ ಅತ್ಯಂತ ಗೌರವವನ್ನು ಕೊಡುವ ಅಂಶವಾಗಿದೆ. ಯಾರೇ ಒಬ್ಬರು ರಾಜಕೀಯದೊಡನೆ ಸಂಬಂಧವಿಟ್ಟುಕೊಂಡರೆ ಅವರ ಎಲ್ಲಾ ಇಚ್ಛೆಯನ್ನು ಪೂರೈಸಲು ಸುಗಮವಾಗುತ್ತದೆ ಎಂಬ ನಂಬಿಕೆ ಬೆಳೆದು ಬಿಟ್ಟಿದೆ. ರಾಜಕೀಯದಲ್ಲಿ ಇರುವ ವ್ಯಕ್ತಿಗೆ ಇಂದಿನ ಸಮಾಜ ಅತೀ ಹೆಚ್ಚಿನ ಸ್ಥಾನಮಾನ ನೀಡಿದೆ. ಈ ಹಿನ್ನೆಲೆಯಲ್ಲಿ ತಮ್ಮ ಸಾಮಾಜಿಕ ಸ್ಥಾನದಲ್ಲಿ ಏನಾದರೂ ಬದಲಾವಣೆ ಆಗಿದೆಯಾ ಎಂದು ಮಹಿಳಾ ಮಾಹಿತಿದಾರರಿಗೆ ಕೇಳಲಾಯಿತು. ಕೋಷ್ಟಕ ೫.೫ ರಲ್ಲಿ ಇದರ ಕುರಿತು ಮಾಹಿತಿಯನ್ನು ನೀಡಲಾಗಿದೆ.

ಕೋಷ್ಟ ೫.೫
ಚುನಾಯಿತ ಮಹಿಳೆಯರ ಸಾಮಾಜಿಕ ಸ್ಥಾನ

| ಕ್ರ.ಸಂ. | ಸ್ಥಾನಮಾನ | ಸಂಖ್ಯೆ | ಶೇಕಡ |
|---|---|---|---|
| ೦೧ | ಬದಲಾವಣೆ ಆಗಿದೆ | ೬೮ | ೯೭.೧೪ |
| ೦೨ | ಬದಲಾವಣೆ ಆಗಿಲ್ಲ | ೦೨ | ೨.೮೬ |
| | ಒಟ್ಟು | ೭೦ | ೧೦೦.೦೦ |

ಕೋಷ್ಟಕ ೫.೫ ಪ್ರಕಾರ ಶೇಕಡ ೯೭.೧೪ ರಷ್ಟು ಮಹಿಳೆಯರು ಚುನಾಯಿತ ಸದಸ್ಯರಾಗಿರುವುದರಿಂದ ತಮ್ಮ ಸ್ಥಾನಮಾನ ಬದಲಾವಣೆ ಆಗಿದೆ ಎಂದೂ ಕೇವಲ ಶೇಕಡ ೨.೮೬ರಷ್ಟು ತಮ್ಮ ಸಾಮಾಜಿಕ ಸ್ಥಾನಮಾನ ಬದಲಾವಣೆ ಆಗಿಲ್ಲ ಎಂಬುದಾಗಿ ತಿಳಿಸಿದರು. ಹೆಚ್ಚಿನ ಮಹಿಳೆಯರು ತಮ್ಮ ಸಾಮಾಜಿಕ ಸ್ಥಾನಮಾನ ಬದಲಾವಣೆ ಆಗಿದೆ ಎಂದಿದ್ದು, ಇದು ಉತ್ತಮ ಬೆಳವಣಿಗೆ ಎಂದರೆ ತಪ್ಪಾಗಲಾರದು. ಇದಕ್ಕೆ ಪೂರಕವಾಗಿ ನಾವು ಮಾಹಿತಿದಾರರಲ್ಲಿ ತಮ್ಮ ಚುನಾವಣೆ ನಂತರದ ಜೀವನದಲ್ಲಿ ಯಾವ ರೀತಿ ಬದಲಾವಣೆಗಳಾಗಿವೆ ಎಂದು ಕೇಳಿದಾಗ ಸುಮಾರು ಶೇಕಡ ೨೫ರಷ್ಟು ಮಹಿಳೆಯರು ಊರಿನ ಜನರು ಇತ್ತೀಚೆಗೆ ನಮ್ಮನ್ನು ಗೌರವ ಹಾಗೂ ಮಾರ್ಯಾದೆ ನೀಡಿ ಮಾತನಾಡುತ್ತಾರೆ. ನಮ್ಮೊಡನೆ ಚರ್ಚಿಸುತ್ತಾರೆ ಎಂದರು. ಚುನಾಯಿತ ಸದಸ್ಯೆ ಆಗಿರುವುದರಿಂದ ಈಗ ಮನೆಯಲ್ಲಿ ಎಲ್ಲಾ ಸದಸ್ಯರು ಅತೀ ವಿನಯದಿಂದ ವಿಷಯಗಳನ್ನು ಚರ್ಚಿಸಿಸುತ್ತಾರೆ (ಶೇಕಡ ೧೫. ೭೨) ಎಂದು ನುಡಿದರು.

ಕೋಷ್ಟಕ ೫.೬
ಚುನಾಯಿತ ಮಹಿಳೆಯರ ಸಾಮಾಜಿಕ ಸ್ಥಾನಮಾನದಲ್ಲಿ ಬದಲಾವಣೆ

| ಕ್ರ.ಸಂ. | ಬದಲಾವಣೆ | ಸಂಖ್ಯೆ | ಶೇಕಡ |
|---|---|---|---|
| ೦೧ | ಜನರಿಂದ ಹೆಚ್ಚಿನ ಗೌರವ | ೧೭ | ೨೪.೨೯ |
| ೦೨ | ಮನೆಯಲ್ಲಿ ಹೆಚ್ಚಿನ ಗೌರವ | ೧೧ | ೧೫.೭೨ |
| ೦೩ | ಸರ್ಕಾರಿ ಕಛೇರಿಗಳಲ್ಲಿ ಗೌರವ | ೧೪ | ೨೦.೦೦ |
| ೦೪ | ಗಂಡ ಮಕ್ಕಳಿಗೆ ಗೌರವ | ೦೯ | ೧೨.೮೫ |
| ೦೫ | ಮೇಲಿನ ಎಲ್ಲಾ ಅಂಶಗಳು | ೧೭ | ೨೪.೨೯ |
| ೦೬ | ಗೌರವವಿಲ್ಲ | ೨ | ೨.೮೫ |
| | ಒಟ್ಟು | ೭೦ | ೧೦೦.೦೦ |

ಚುನಾಯಿತರಾದ ನಂತರ ಆದ ಮುಖ್ಯ ಬದಲಾವಣೆ ಏನೆಂದರೆ ಈಗಿನ ಎಲ್ಲಾ ಸರ್ಕಾರಿ ಕಛೇರಿಗಳಲ್ಲಿ, ನೌಕರರು ಗೌರವ ನೀಡಿ ತಮ್ಮ ಪ್ರತಿಯೊಂದು ಕೆಲಸವನ್ನು ಆದಷ್ಟು ಬೇಗ ಮಾಡಿಕೊಡುತ್ತಾರೆ ಎಂದು ಶೇಕಡಾ ೨೦ರಷ್ಟು ಮಹಿಳೆಯರು ಹೇಳಿದರು. ಚುನಾವಣೆಯಲ್ಲಿ ಗೆದ್ದ ನಂತರ ಮಕ್ಕಳ ಮತ್ತು ಗಂಡನ ಪ್ರತಿಷ್ಠೆ ಹೆಚ್ಚಿದೆ ಎಂದು ಶೇಕಡಾ ೧೨.೮೫ರಷ್ಟು ಮಹಿಳೆಯರು ಉತ್ತರಿಸಿದರು. ಗ್ರಾಮಸಭೆಗಳಲ್ಲಿ ನಡೆಯುವ ಚರ್ಚೆಗಳಲ್ಲಿ ಪುರುಷ ಸದಸ್ಯರು ಹೇಳಿದ ರೀತಿ ಕೇಳಿದರೂ, ಮತ್ತು ಚರ್ಚೆಯಲ್ಲಿ ಭಾಗವಹಿಸದೆ ಇದ್ದರೂ, ಗ್ರಾಮ ಪಂಚಾಯತಿಯ ಹೊರಗೆ ಆದ ಅನೇಕ ಬದಲಾವಣೆಗಳು ಮಹಿಳೆಯರ ಗೌರವ, ಸ್ಥಾನಗಳನ್ನು ಹೆಚ್ಚಿಸಿವೆ ಎಂದು ಇದರಿಂದ ತಿಳಿಯಬಹುದು.

**ಚುನಾಯಿತ ಮಹಿಳೆಯರ ಪಂಚಾಯಿತಿ ಕಛೇರಿಯ ಭೇಟಿ**

ಆಡಳಿತದಲ್ಲಿ ಭಾಗವಹಿಸುವಿಕೆಯು ಪ್ರಮುಖ ಪಾತ್ರವಹಿಸುತ್ತದೆ. ಚುನಾಯಿತ ಮಹಿಳೆಯರು ಯಾವಾಗ, ಎಷ್ಟು ಸಾರಿ ತಮ್ಮ ಪಂಚಾಯಿತಿ ಕಛೇರಿಗೆ ಹೋಗುತ್ತಾರೆ ಎಂಬುದನ್ನು ಕೋಷ್ಟಕ ೫. ೭ರಲ್ಲಿ ನೀಡಲಾಗಿದೆ.

ಕೋಷ್ಟಕ ೫.೭
ಚುನಾಯಿತ ಮಹಿಳೆಯರು ಪಂಚಾಯತಿ ಕಛೇರಿಗೆ ಭೇಟಿ

| ಕ್ರ.ಸಂ. | ಭೇಟಿ | ಸಂಖ್ಯೆ | ಶೇಕಡ |
|---|---|---|---|
| ೦೧ | ದಿನಾಲು | ... | ... |
| ೦೨ | ವಾರಕ್ಕೊಮ್ಮೆ | ೦೨ | ೨.೮೫ |
| ೦೩ | ತಿಂಗಳಿಗೊಮ್ಮೆ | ೬೮ | ೯೭.೧೫ |
| | ಒಟ್ಟು | ೭೦ | ೧೦೦.೦೦ |

ಕೋಷ್ಟಕ ೫.೭ನ್ನು ನೋಡಿದಾಗ ಹೆಚ್ಚು ಚುನಾಯಿತ ಮಹಿಳೆಯರು ತಿಂಗಳಿಗೆ ಒಂದು ಸಲ ಮಾತ್ರ ಪಂಚಾಯಿತಿ ಕಛೇರಿಗೆ ಹೋಗುತ್ತಾರೆ. ತಿಂಗಳಿಗೆ ಒಂದು ಸಲ ಎಂದರೆ ತಿಂಗಳ ಸಭೆಗೆ ಮಾತ್ರ ಭಾಗವಹಿಸುತ್ತಾರೆ. ಚುನಾಯಿತ ಮಹಿಳೆಯರಲ್ಲಿ ಶೇಕಡ ೯೭ರಷ್ಟು ಮಹಿಳೆಯರು ಪಂಚಾಯಿತಿ ಕಛೇರಿಗೆ ಭಾಗವಹಿಸುತ್ತಾರೆ. ವಾರಕ್ಕೊಮ್ಮೆ ಶೇಕಡ ೩ರಷ್ಟು ಮಾತ್ರ ಮಹಿಳೆಯರು ಪಂಚಾಯಿತಿ ಕಛೇರಿಗೆ ಹೋಗುತ್ತಿರುವುದನ್ನು ಗಮನಿಸಬಹುದು. ಎಲ್ಲಾ ಚುನಾಯಿತ ಮಹಿಳೆಯರು ತಿಂಗಳ ಸಭೆಗೆ ಭಾಗವಹಿಸುತ್ತಾರೆ. ಮಹಿಳಾ ಅಧ್ಯಕ್ಷರಾದರೂ ಸಹ ವಾರಕ್ಕೊಂದು ಬಾರಿ ಪಂಚಾಯಿತಿ ಕಛೇರಿಗೆ ಹೋಗುವುದಿಲ್ಲ ಎನ್ನುವುದು ಶೋಚನೀಯ ವಿಚಾರವಾಗಿದೆ. ಅಧ್ಯಕ್ಷಿಣೆಯರೊಡನೆ ಏನಾದರೂ ಕೆಲಸ ಆಗಬೇಕಿದ್ದರೆ ಅವರ ಮನೆಗೆ ಹೋಗಿ ಮಾಡಿಸಿಕೊಂಡು ಬರುವ ಪದ್ಧತಿ ಗ್ರಾಮೀಣ ಪ್ರದೇಶದಲ್ಲಿ ಅತಿ ಹೆಚ್ಚು ಕಂಡು ಬಂದಿದೆ.

**ಚುನಾಯಿತ ಮಹಿಳೆಯರ ಪ್ರಗತಿ ಕಾರ್ಯಗಳ ವಿವರ**

ಗ್ರಾಮೀಣ ಮಟ್ಟದಲ್ಲಿ ಜನರಿಗೆ ಯೋಜನೆಗಳು ನೇರವಾಗಿ ಮುಟ್ಟುವ ದೃಷ್ಟಿಯಿಂದ ಅತಿ ಹೆಚ್ಚು ಪ್ರಗತಿ ಕಾರ್ಯಗಳ ಹೊಣೆ ಆಯಾ ಗ್ರಾಮ ಪಂಚಾಯಿತಿಗೆ ಒಳಪಟ್ಟಿರುತ್ತದೆ. ಯೋಜನೆಗಳ ಫಲಗಳು ನೇರವಾಗಿ ತಲುಪುವುದು ಪಂಚಾಯಿತಿಗಳ ಮೂಲಕ. ಈ ಎಲ್ಲಾ ಹಿನ್ನೆಲೆಯಲ್ಲಿ ಚುನಾಯಿತ ಮಹಿಳೆಯರು ಯಾವ ಪ್ರಗತಿಕಾರ್ಯಗಳನ್ನು ಕೈಗೊಂಡಿದ್ದಾರೆ ಎಂಬುದನ್ನು ತಿಳಿಯುವುದು ಅವಶ್ಯಕ. ಕೋಷ್ಟಕ ೫.೮ರಲ್ಲಿ ಇದರ ಕುರಿತು ಮಾಹಿತಿ ನೀಡಲಾಗಿದೆ.

ಕೋಷ್ಟಕ ೫.೮

ಚುನಾಯಿತ ಮಹಿಳೆಯರ ಕೈಗೊಂಡ ಪ್ರಗತಿ ಕಾರ್ಯಗಳು

| ಕ್ರ.ಸಂ. | ಪ್ರಗತಿ ಕಾರ್ಯಗಳು | ಸಂಖ್ಯೆ | ಶೇಕಡ |
|---|---|---|---|
| ೦೧ | ನೈರ್ಮಲ್ಯೀಕರಣ | ೦೭ | ೧೦.೦೦ |
| ೦೨ | ರಸ್ತೆ ನಿರ್ಮಾಣ | ೦೪ | ೫.೭೨ |
| ೦೩ | ಬೀದಿ ದೀಪ | ೦೯ | ೧೨.೮೫ |
| ೦೪ | ಫಲಾನುಭವಿಗಳ ಆಯ್ಕೆ | ... | ... |
| ೦೫ | ಭಾಗ್ಯ ಜ್ಯೋತಿ | ೧೫ | ೨೧.೪೩ |
| ೦೬ | ಇತರ | ೧೦ | ೧೪.೨೮ |
| ೦೭ | ಯಾವುದು ಇಲ್ಲ | ೨೫ | ೩೫.೭೨ |
| | ಒಟ್ಟು | ೭೦ | ೧೦೦.೦೦ |

ಕೋಷ್ಟಕ ೫.೮ರಲ್ಲಿ ಅಂಕಿ ಅಂಶಗಳನ್ನು ನೋಡಿದಾಗ ಗ್ರಾಮಸಭೆಯಲ್ಲಿ ಫಲಾನುಭವಿಗಳ ಆಯ್ಕೆಯಲ್ಲಿ ಚುನಾಯಿತ ಮಹಿಳೆಯರು ಭಾಗವಹಿಸದೆ ಇರುವುದು ಕಂಡು ಬಂದಿದೆ. ಚುನಾಯಿತ ಮಾಹಿತಿದಾರರ ಮಹಿಳೆಯರಲ್ಲಿ ಶೇಕಡ ೨೫.೭೨ರಷ್ಟು ಮಹಿಳೆಯರು ಯಾವುದೇ ಪ್ರಗತಿ ಕಾರ್ಯಗಳನ್ನು ಕೈಗೊಂಡಿಲ್ಲ. ಆದರೆ ಶೇಕಡ ೬೫ರಷ್ಟು ಮಹಿಳೆಯರು ತಮ್ಮ ಗ್ರಾಮದ ವಿಭಿಧ ಪ್ರಗತಿ ಕಾರ್ಯಗಳಲ್ಲಿ ಖುದ್ದಾಗಿ ಭಾಗವಹಿಸಿ ಅದರ ಉಸ್ತುವಾರಿ ತೆಗೆದುಕೊಂಡಿದ್ದಾರೆ. ಜನರೊಡನೆ ಭಾಗವಹಿಸುವುದರಿಂದ ಚುನಾಯಿತ ಮಹಿಳೆಯರ ಪ್ರಾಮುಖ್ಯತೆ ಹೆಚ್ಚುತ್ತದೆ. ಹಾಗೂ ಜನರು ಗೌರವದಿಂದ ನೋಡಿಕೊಳ್ಳುತ್ತಾರೆ. ಮೂಲಭೂತ ಸೌಕರ್ಯಗಳನ್ನು ಗ್ರಾಮಾಂತರ ಪ್ರದೇಶದಲ್ಲಿ ಒದಗಿಸುವುದರಲ್ಲಿ ಗ್ರಾಮ ಪಂಚಾಯಿತಿ ಸದಸ್ಯರ ಪಾತ್ರ ಮುಖ್ಯವಾಗಿದೆ.

ಜನರ ಆಶೋತ್ತರಗಳನ್ನು ಪೂರೈಸುವುದಕ್ಕೆ ಚುನಾಯಿತ ಮಹಿಳೆಯರು ಬದ್ಧರಾಗಿರಬೇಕು. ಗ್ರಾಮ ಪಂಚಾಯಿತಿ ಮಹಿಳೆಯರು ಪ್ರಮುಖವಾಗಿ ಗ್ರಾಮಗಳಿಗಾಗಿ ಶ್ರಮವಹಿಸಬೇಕು. ಗ್ರಾಮಸ್ಥರ ಬೇಡಿಕೆಗಳನ್ನು ಪೂರೈಸುತ್ತಿರಬೇಕು. ಸರ್ಕಾರವು ಜನರ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಂಥಹ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುತ್ತದೆ. ಈ ಕಾರ್ಯಗಳಿಗೆ ಪ್ರತಿನಿಧಿಯಾಗಿ ಚುನಾಯಿತ ಸದಸ್ಯರು ಇರಬೇಕು. ಪ್ರತಿ ತಿಂಗಳು ನಡೆಯುವ ಪಂಚಾಯಿತಿ ಸಭೆಗಳಲ್ಲಿ ಅವರು ಭಾಗವಹಿಸಿ ಜನರ ಬೇಡಿಕೆಗಳನ್ನು ಈಡೇರಿಸಬೇಕು ಈ ಹಿನ್ನೆಲೆಯಲ್ಲಿ ಯಾವ ರೀತಿಯಾಗಿ ಚುನಾಯಿತ ಮಹಿಳೆಯರು ಜನರ ಬೇಡಿಕೆಗಳನ್ನು ಈಡೇರಿಸಿದ್ದಾರೆ? ಅವರು ಎದುರಿಸಬೇಕಾದ ಸಮಸ್ಯೆಗಳಾವುವು ? ಈ ಪ್ರಶ್ನೆಗಳಿಗೆ ಕುರಿತಾದ ವಿವರವನ್ನು ಕೋಷ್ಟಕ ೫.೯ ರಲ್ಲಿ ನೀಡಲಾಗಿದೆ.

ಕೋಷ್ಟಕ ೫.೯

ಚುನಾಯಿತ ಮಹಿಳೆಯರು ಗ್ರಾಮಸ್ಥರ ಬೇಡಿಕೆಗಳನ್ನು ಪೂರೈಸಿದುದರ ಕುರಿತು.

| ಕ್ರ.ಸಂ. | ಬೇಡಿಕೆಗಳು | ಸಂಖ್ಯೆ | ಶೇಕಡ |
|---|---|---|---|
| ೦೧ | ಪೂರೈಸಿಲ್ಲ | ೨೨ | ೩೧.೪೨ |
| ೦೨ | ಪೂರೈಸಿದ್ದೇನೆ | ೧೩ | ೧೮.೫೭ |
| ೦೩ | ಪೂರೈಸಲು ಪಂಚಾಯತಿ ಅಧ್ಯಕ್ಷರ ಅಡ್ಡಿ | ೦೬ | ೮.೫೭ |
| ೦೪ | ಪೂರೈಸಲು ಪಂಚಾಯತಿ ಸದಸ್ಯರ ಅಡ್ಡಿ | ೨೯ | ೪೧.೪೩ |
| | ಒಟ್ಟು | ೭೦ | ೧೦೦.೦೦ |

ಈ ಕೋಷ್ಟಕದ ಅನ್ವಯ ಸುಮಾರು ಶೇಕಡ ೩೦ಕ್ಕಿಂತ ಅಧಿಕ ಮಹಿಳೆಯರು ತಾವು ಇದುವರೆಗೂ ಯಾವುದೇ ಬೇಡಿಕೆಗಳನ್ನು ಈಡೇರಿಸಿಲ್ಲವೆಂದರು. ಆದರೆ ಅದೆಷ್ಟೋ ಮಹಿಳೆಯರಿಗೆ ಗ್ರಾಮಸ್ಥರ ಬೇಡಿಕೆಗಳನ್ನು ಪೂರೈಸಲು ಇಷ್ಟವಿದ್ದರೂ ಅಧ್ಯಕ್ಷರು ಹಾಗು ಸದಸ್ಯರು ಆದಕ್ಕೆ ಅಡ್ಡಿ ಬರುತ್ತಾರೆ ಎಂದರು. ನಾವು ಯಾವುದೇ ಬೇಡಿಕೆಗಳನ್ನಿಟ್ಟರೂ ಪುರುಷ ಸದಸ್ಯರು ಅದನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲವೆಂದರು. ಈ ಒಳ ಜಗಳದಿಂದ ಗ್ರಾಮಗಳ ಪ್ರಗತಿ ಆಮೆ ಗತಿಯಲ್ಲಿ ಸಾಗುತ್ತಿದೆ ಹಾಗೂ ಅವುಗಳ ಕಾರ್ಯನುಷ್ಠಾನಕ್ಕೆ ಅಡ್ಡಿಯಾಗುವಂಥಹ ಭಯವೂ ಇದೆ.

# ಅಧ್ಯಾಯ ೬

## ಸಾರಾಂಶ ಮತ್ತು ಫಲಿತಗಳು

ಪ್ರಸ್ತುತ ಅಧ್ಯಯನದ ಶೀರ್ಷಿಕೆ ತಿಳಿಸುವಂತೆ ಈ ಅಧ್ಯಯನದ ಕೇಂದ್ರ ವಸ್ತು ವಿಷಯ 'ಪಂಚಾಯತ್ ರಾಜ್ ಮತ್ತು ಮಹಿಳೆ'. ಪಂಚಾಯತ್ ರಾಜ್, ಅಲ್ಲಿ ಮಹಿಳೆಯರ ಕಾರ್ಯಭಾರ, ಅವರ ಸ್ಥಾನಮಾನ, ಪಾತ್ರ ಮುಂತಾದವುಗಳ ಸುತ್ತ ಈ ಅಧ್ಯಯನವನ್ನು ಕಟ್ಟಲಾಗಿದೆ. ಅಧ್ಯಯನ ಕ್ಷೇತ್ರವಾದ ಹಗರಿಬೊಮ್ಮನ ಹಳ್ಳಿ ತಾಲ್ಲೂಕಿನ ಗ್ರಾಮ ಪಂಚಾಯಿತಿಗಳ ಮಹಿಳಾ ಸದಸ್ಯರು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಅನುವಾಗಬಲ್ಲ ಪರಿಹಾರೋಪಾಯಗಳನ್ನು ಗುರುತಿಸಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

ಈ ಪ್ರೌಢ ಪ್ರಬಂಧದ ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನ ವಿಷಯದ ನಿರೂಪಣೆ, ಅಧ್ಯಯನದ ಉದ್ದೇಶ, ಅಧ್ಯಯನ ವಿಧಾನ, ವ್ಯಾಪ್ತಿ, ಮಹತ್ವ ಮತ್ತು ಅಧ್ಯಾಯಗಳ ವಿನ್ಯಾಸವನ್ನು ಮಂಡಿಸಲಾಗಿದೆ. ಅಂದರೆ ಅಧ್ಯಯನದ 'ಏನು', 'ಏಕೆ' ಮತ್ತು 'ಹೇಗೆ' ಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಉಪಸಂಹಾರರೋಪಾದಿಯಲ್ಲಿರುವ ಪ್ರಸ್ತುತ ಕೊನೆಯ ಅಧ್ಯಾಯದಲ್ಲಿ ಈ ಪ್ರಬಂಧದ ಮೊದಲ ಅಧ್ಯಾಯದಲ್ಲಿ ಉಲ್ಲೇಖಿಸಿರುವ ಪ್ರಶ್ನೆಗಳಿಗೆ ಉತ್ತರವೇನೊ ಎನ್ನುವ ಹಾಗೆ ಇಲ್ಲಿ ಇಡೀ ಅಧ್ಯಯನದ ಸಮಗ್ರ ಸಂಕ್ಷಿಪ್ತ ಸಾರಾಂಶವನ್ನು ನೀಡಲಾಗಿದೆ. ಕೊನೆಯದಾಗಿ ಈ ಕೊನೆಯ ಅಧ್ಯಾಯದಲ್ಲಿ ಗ್ರಾಮ ಪಂಚಾಯತಿಗಳ ಚುನಾಯಿತ ಮಹಿಳಾ ಸದಸ್ಯರು ಕ್ರಿಯಾಶೀಲರಾಗಿ ಕಾರ್ಯ ನಿರ್ವಹಿಸಲು ಬೇಕಾದ ಸಲಹೆಗಳನ್ನು ನೀಡಲಾಗಿದೆ. ಈ ಪ್ರೌಢ ಪ್ರಬಂಧದ ಮೊದಲನೆಯ ಅಧ್ಯಾಯ ಹಾಗೂ ಕೊನೆಯ ಅಧ್ಯಾಯಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿದರೆ ಸೂಕ್ಷ್ಮಗ್ರಾಹಿ ಸಂಶೋಧಕರಿಗೆ ಈ ಅಧ್ಯಯನದಲ್ಲಿ ಏನು ನಡೆದಿದೆ ಎಂಬುದನ್ನು ಗ್ರಹಿಸಲು ಸಾಧ್ಯ.

ಈ ಕೊನೆಯ ಮತ್ತು ಆರನೆಯ ಅಧ್ಯಾಯದಲ್ಲಿ ಒಟ್ಟು ಮೂರು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಸಾರಾಂಶವನ್ನು, ಎರಡನೆಯ ಭಾಗದಲ್ಲಿ ಫಲಿತಗಳನ್ನು ಮತ್ತು ಮೂರನೆಯ ಭಾಗದಲ್ಲಿ ಮಹಿಳೆಯರ ಕ್ರಿಯಾಶೀಲತೆ ಉತ್ತಮಗೊಳ್ಳಲು ಉಪಾಯಗಳನ್ನು ಮಂಡಿಸಲಾಗಿದೆ.

ಭಾಗ - ೧

## ಅಧ್ಯಯನದ ಸಾರಾಂಶ

ಈ ಪ್ರೌಢ ಪ್ರಬಂಧದಲ್ಲಿ ಆರು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯವು ಅಧ್ಯಯನ ವಿಷಯದ ಮಂಡನೆ, ವ್ಯಾಪ್ತಿ, ಉದ್ದೇಶ, ಅಧ್ಯಯನ ವಿಧಾನ, ಅಧ್ಯಯನದ ಅಧ್ಯಾಯಗಳ ವಿನ್ಯಾಸ ಮೊದಲಾದವುಗಳನ್ನು ಒಳಗೊಂಡಿದೆ. ಈ ಅಧ್ಯಯನಕ್ಕಾಗಿ ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ೨೨ ಗ್ರಾಮ ಪಂಚಾಯತಿಗಳ ೧೨ ಗ್ರಾಮ ಪಂಚಾಯತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ ಈ ೧೨ ಗ್ರಾಮ ಪಂಚಾಯತಿಗಳಲ್ಲಿನ ಒಟ್ಟು ೯೦ ಚುನಾಯಿತ ಮಹಿಳಾ ಸದಸ್ಯರ ಪೈಕಿ ೭೦ ಮಹಿಳಾ ಸದಸ್ಯರನ್ನು ಉದ್ದೇಶ ಪೂರ್ವಕವಾಗಿ ಆಯ್ದುಕೊಂಡು ಅವರನ್ನು ಮೊದಲೆ ಸಿದ್ಧಪಡಿಸಿದ ಸಂದರ್ಶನ ಸೂಚಿಯ ಮೂಲಕ ಸಂದರ್ಶನ ಗೈದು ಅವರಿಂದ ಪ್ರಾಥಮಿಕ ಮಾಹಿತಿ, ಪಂಚಾಯತಿಯ ಚಟುವಟಿಕೆಗಳ ಬಗ್ಗೆ ಅವರ ಅಭಿಪ್ರಾಯವನ್ನು ತಿಳಿದುಕೊಳ್ಳಲಾಗಿದೆ.

ಎರಡನೆಯ ಅಧ್ಯಾಯವು ಮಹಿಳೆ ಮತ್ತು ರಾಜಕೀಯಗಳ ನಡುವಿನ ಸಂಬಂಧ ಕುರಿತದ್ದಾಗಿದೆ. ಈ ಅಧ್ಯಾಯದಲ್ಲಿ ಮಹಿಳೆಯರು ಮತ್ತು ರಾಜಕೀಯಗಳ ನಡುವಿನ ಸಂಬಂಧ, ಪ್ರಭಾವಗಳನ್ನು ಚರ್ಚಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ರಾಜಕೀಯ ಪ್ರವಾಹದಲ್ಲಿ ಸೇರಲು ಮಹಿಳೆಯರಿಗೆ ಇರುವ ಅಡ್ಡಿಗಳು, ರಾಜಕೀಯ ಪ್ರಕ್ರಿಯೆಯಲ್ಲಿ ಮಹಿಳೆಯರ ಪ್ರಭಾವ ಮತ್ತು ಪಾತ್ರ ಮುಂತಾದವುಗಳನ್ನು ಸೈದ್ಧಾಂತಿಕವಾಗಿ ವಿಶ್ಲೇಷಿಸಲಾಗಿದೆ. ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಮಹಿಳೆಯರ ಸಹಭಾಗಿತ್ವ ಹಾಗೂ ಅದರ ಪರಿಣಾಮಗಳು ಮುಂತಾದವುಗಳನ್ನು ಚರ್ಚಿಸಲಾಗಿದೆ.

ಮೂರನೆ ಅಧ್ಯಾಯವು ನಮ್ಮ ಅಧ್ಯಯನದಲ್ಲಿ ಆಯ್ಕೆಯಾದ ಚುನಾಯಿತ ಮಹಿಳಾ ಸದಸ್ಯರ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ಮೊದಲು ಚುನಾಯಿತ ಮಹಿಳಾ ಸದಸ್ಯರ ವಯೋಮಾನ, ಶಿಕ್ಷಣ ಮಟ್ಟ, ಜಾತಿ ವಿವರ, ಆದಾಯ ಮಟ್ಟ ಮತ್ತು ವೈವಾಹಿಕ ವಿವರಗಳನ್ನು ನೀಡಲಾಗಿದೆ. ಎರಡನೆಯದಾಗಿ ಚುನಾಯಿತ ಮಹಿಳಾ ಸದಸ್ಯರ ಗಂಡಂದಿರ ಶಿಕ್ಷಣ ಮಟ್ಟ ಮತ್ತು ಅವರ ಆದಾಯವನ್ನೂ ಮೂರನೆಯದಾಗಿ ಅವರ ಮಕ್ಕಳ ಶಿಕ್ಷಣ ಮಟ್ಟವನ್ನು ಕುರಿತ ಮಾಹಿತಿ ನೀಡಲಾಗಿದೆ.

ಚುನಾಯಿತ ಮಹಿಳಾ ಸದಸ್ಯರ ವಯೋಮಾನ ಗಮನಿಸಿದರೆ ೨೬ ರಿಂದ ೪೫ ವರ್ಷಗಳ ವಯೋಮಾನದಲ್ಲಿರುವವರು ಶೇ. ೯೦ರಷ್ಟು ಇರುವುದು ತಿಳಿದು ಬರುತ್ತದೆ. ಉಳಿದ ಶೇ.೮ ರಷ್ಟು

ಮಹಿಳೆಯರು ೪೭ಕ್ಕಿಂತ ಅಧಿಕ ವಯೋಮಾನದವರಾಗಿದ್ದಾರೆ. ಆದರೆ ೧೮ ರಿಂದ ೨೫ ವರ್ಷಗಳ ವಯೋಮಾನದ ಗುಂಪಿನಲ್ಲಿರುವ ಮಹಿಳೆಯರ ಪ್ರಮಾಣ ಕೇವಲ ಶೇ. ೧.೪೨.

ಶೈಕ್ಷಣಿಕವಾಗಿ ೭೦ ಮಹಿಳಾ ಮಾಹಿತಿದಾರರಲ್ಲಿ ಶೇ. ೭೦ರಷ್ಟು ಅನಕ್ಷರಸ್ಥರಾಗಿದ್ದಾರೆ. ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಮುಗಿಸಿದ ಮಹಿಳಾ ಸದಸ್ಯರ ಪ್ರಮಾಣ ಕ್ರಮವಾಗಿ ಶೇ. ೩೮.೫೮ ಮತ್ತು ಶೇ. ೨.೮೫ರಷ್ಟಿದೆ. ಕಾಲೇಜು ಶಿಕ್ಷಣ ಪಡೆದವರು ಇಲ್ಲಿ ಇಲ್ಲವೆ ಇಲ್ಲ. ನಮ್ಮ ನಮೂನೆಯಲ್ಲಿನ ಒಟ್ಟು ಆರು ಮಹಿಳಾ ಅಧ್ಯಕ್ಷರುಗಳಲ್ಲಿ ಮೂವರು ಅನಕ್ಷರಸ್ಥರು ಹಾಗೂ ಇಬ್ಬರು ಪ್ರಾಥಮಿಕ ಹಾಗೂ ಒಬ್ಬರು ಪ್ರೌಢ ಶಾಲಾ ಶಿಕ್ಷಣ ಪಡೆದಿದ್ದಾರೆ.

ಜಾತಿಯಾಧಾರಿತವಾಗಿ ಚುನಾಯಿತ ಮಹಿಳಾ ಮಾಹಿತಿದಾರರನ್ನು ಪರಿಶೀಲಿಸಿದಾಗ ಶೇ.೩೮.೫೮ ಹಿಂದುಳಿದ ವರ್ಗಕ್ಕೆ, ಶೇ. ೨೧.೪೨ರಷ್ಟು ಪರಿಶಿಷ್ಟ ಜಾತಿಗೆ ಹಾಗೂ ಶೇ. ೧೮.೫೮ರಷ್ಟು ಪರಿಶಿಷ್ಟ ಪಂಗಡಕ್ಕೆ ಸೇರಿರುವುದು ತಿಳಿದು ಬರುತ್ತದೆ.

ಆದಾಯದ ವಿವರ ಪರಿಶೀಲಿಸಿದಾಗ ಶೇ. ೭೫ಕ್ಕೂ ಹೆಚ್ಚು ಮಹಿಳೆಯರ ವಾರ್ಷಿಕ ಆದಾಯ ೩೫೦೦ ರಿಂದ ೮೦೦೦ ರೂಪಾಯಿ ಒಳಗೆ ಇರುವುದು ತಿಳಿಯುತ್ತದೆ. ವಾರ್ಷಿಕ ಆದಾಯ ೩೫,೦೦೦ವನ್ನು ಮೀರಿದ ಶೇ. ೫ ರಷ್ಟು ಮಹಿಳಾ ಸದಸ್ಯರಿದ್ದಾರೆ.

ನಾವು ಆಯ್ಕೆ ಮಾಡಿಕೊಂಡ ಚುನಾಯಿತ ಮಹಿಳಾ ಸದಸ್ಯರಲ್ಲಿ ಅವಿವಾಹಿತರು ಯಾರು ಇಲ್ಲ. ದೇವದಾಸಿಯರು ಶೇ. ೮.೫೮ ಮತ್ತು ವಿಧವೆಯರು ಶೇ. ೨.೮೫ ರಷ್ಟಿದ್ದಾರೆ. ಉಳಿದ ಶೇ. ೮೮.೫೭ರಷ್ಟು ಮಹಿಳೆಯರು ವಿವಾಹಿತರು.

ಚುನಾಯಿತ ಮಹಿಳಾ ಸದಸ್ಯರ ಗಂಡಂದಿರ ಶಿಕ್ಷಣವು ಉತ್ತಮವಾಗಿರುವುದು ಕಂಡು ಬಂದಿದೆ. ಚುನಾಯಿತ ಮಹಿಳಾ ಸದಸ್ಯರಲ್ಲಿ ಶೇ. ೫೮.೭೭ರಷ್ಟು ಅನಕ್ಷರಸ್ಥರಿದ್ದರೆ, ಅವರ ಗಂಡಂದಿರಲ್ಲಿ ಅನಕ್ಷರತೆ ಪ್ರಮಾಣ ಕೇವಲ ಶೇ. ೧೭.೧೪. ಚುನಾಯಿತ ಮಹಿಳಾ ಸದಸ್ಯರ ಅಕ್ಷರಸ್ಥರ ಗಂಡಂದಿರಲ್ಲಿ ಶೇ. ೪೭.೧೪ರಷ್ಟು ಪ್ರಾಥಮಿಕ ಶಿಕ್ಷಣವನ್ನು ಪಡೆದಿದ್ದಾರೆ. ಇದೇ ರೀತಿ ಚುನಾಯಿತ ಮಹಿಳಾ ಸದಸ್ಯೆಯರ ಮಕ್ಕಳ ಶಿಕ್ಷಣದ ವಿವರವನ್ನು ಪರಿಶೀಲಿಸಿದಾಗ, ಅನಕ್ಷರತೆ ಆ ಮಕ್ಕಳಲ್ಲಿ ಶೇ. ೧೮.೧೭ರಷ್ಟಿರುವುದು ಕಂಡು ಬಂದಿದೆ. ಚುನಾಯಿತ ಮಹಿಳಾ ಸದಸ್ಯೆಯರ ಮಕ್ಕಳಲ್ಲಿ ಶೇ. ೫೦.೪೧ರಷ್ಟು ಮಕ್ಕಳು ಪ್ರಾಥಮಿಕ ಶಿಕ್ಷಣವನ್ನು ಪಡೆದಿದ್ದಾರೆ.

ಈ ಮಕ್ಕಳಲ್ಲಿ ಶೇ. ೩.೮೫ರಷ್ಟು ಕಾಲೇಜು ಶಿಕ್ಷಣ ಪಡೆದಿದ್ದಾರೆ. ಒಟ್ಟಾರೆ ಚುನಾಯಿತ ಮಹಿಳಾ ಸದಸ್ಯರ ಮಕ್ಕಳ ಶಿಕ್ಷಣಮಟ್ಟವು ಉತ್ತಮವಾಗಿರುವುದು ಕಂಡು ಬಂದಿದೆ.

ಅಧ್ಯಾಯ ನಾಲ್ಕರಲ್ಲಿ ಗ್ರಾಮಸಭೆ ಮತ್ತು ಗ್ರಾಮಸಭೆಗಳಲ್ಲಿ ಚುನಾಯಿತ ಮಹಿಳಾ ಸದಸ್ಯೆಯರ ಪಾತ್ರವನ್ನು ಕುರಿತ ಚರ್ಚೆ ಇದೆ. ಗ್ರಾಮಸಭೆಗಳು ಹೇಗೆ ನಡೆಯುತ್ತವೆ, ಮಹಿಳೆಯರು ಅದರಲ್ಲಿ ಹೇಗೆ ಭಾಗವಹಿಸುತ್ತಾರೆ, ಹೇಗೆ ಚರ್ಚೆ ನಡೆಸುತ್ತಾರೆ ಎಂಬುದನ್ನು ಅಲ್ಲಿ ಚರ್ಚಿಸಲಾಗಿದೆ. ಗ್ರಾಮ ಸಭೆಯ ಮೂಲಕ ಗ್ರಾಮಗಳಲ್ಲಿ ಅನೇಕ ಬಗೆಯ ಸಮುದಾಯ ಕಲ್ಯಾಣ ಕಾರ್ಯಕ್ರಮ ಹಾಗೂ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ. ಗ್ರಾಮಸಭೆಯಲ್ಲಿ ಮಹಿಳೆಯರು ಕ್ರಿಯಾಶೀಲರಾಗಿ ಭಾಗಿಯಾದರೆ ಆ ಸಭೆಯ ಉದ್ದೇಶ ಸಾರ್ಥಕವಾಗುತ್ತದೆ. ನಮ್ಮ ಅಧ್ಯಯನದಲ್ಲಿ ಆಯ್ಕೆಯಾಗಿರುವ ೭೦ ಮಹಿಳಾ ಚುನಾಯಿತ ಸದಸ್ಯೆಯರಲ್ಲಿ ಶೇ. ೭೫ರಷ್ಟು ಮಹಿಳಾ ಸದಸ್ಯರು ಗ್ರಾಮಸಭೆಗಳಲ್ಲಿ ಭಾಗವಹಿಸುವುದಿಲ್ಲ. ಗ್ರಾಮಸಭೆಯೆಂದರೇನು ಎಂಬುದೇ ಶೇ.೧೦ರಷ್ಟು ಮಹಿಳಾ ಸದಸ್ಯೆಯರಿಗೆ ಗೊತ್ತಿಲ್ಲ. ಗ್ರಾಮಸಭೆಗಳಲ್ಲಿ ಶೇ ೧೪.೨೮ರಷ್ಟು ಮಾತ್ರ ಮಹಿಳಾ ಸದಸ್ಯೆಯರು ಭಾಗವಹಿಸುತ್ತಿದ್ದಾರೆ. ಗ್ರಾಮಸಭೆಯಿಂದ ಗ್ರಾಮದ ಅಭಿವೃದ್ಧಿಗೆ ಏನಾದರೂ ಪ್ರಯೋಜನವಾಗುತ್ತದೆಯೆ ಎಂಬ ಪ್ರಶ್ನೆಗೆ ಶೇ. ೮೦ರಷ್ಟು ಚುನಾಯಿತ ಮಹಿಳಾ ಸದಸ್ಯೆಯರು ಪ್ರಯೋಜನವಾಗುತ್ತಿಲ್ಲ ಎಂಬ ಉತ್ತರ ನೀಡಿದ್ದಾರೆ. ಚುನಾಯಿತ ಮಹಿಳಾ ಸದಸ್ಯೆಯರಲ್ಲಿ ಶೇ. ೯೦ರಷ್ಟು ಮಹಿಳೆಯರು ಸರ್ಕಾರಿ ಅಧಿಕಾರಿಗಳು ಸೂಕ್ತಮಾರ್ಗದರ್ಶನ ನೀಡುತ್ತಿದ್ದಾರೆ ಎಂಬ ಅಭಿಪ್ರಾಯಪಟ್ಟರು.

ಐದನೆಯ ಅಧ್ಯಾಯದಲ್ಲಿ ಗ್ರಾಮ ಪಂಚಾಯತಿಗೆ ಮಹಿಳೆಯರು ಚುನಾಯಿತರಾದ ರೀತಿ ಮತ್ತು ಅವರ ಕಾರ್ಯ ವೈಖರಿ ಕುರಿತದ್ದಾಗಿದೆ. ನಮ್ಮ ಅಧ್ಯಯನದಲ್ಲಿ ಆಯ್ಕೆಯಾದ ೭೦ ಮಹಿಳಾ ಸದಸ್ಯೆಯರಲ್ಲಿ ಶೇ.೮೪.೨೯ರಷ್ಟು ಮಹಿಳೆಯರು ಇತರರ ಒತ್ತಾಯಕ್ಕೆ ಮಣಿದು ಚುನಾವಣೆಗೆ ಸ್ಪರ್ಧಿಸಿದ್ದಾರೆ. ಇವರಿಗೆ ಸ್ವಂತ ಇಚ್ಛೆಯಿಲ್ಲ. ಗಂಡನ ಒತ್ತಾಯಕ್ಕೆ ಶೇ. ೪೮.೫೭ರಷ್ಟು ಮಹಿಳೆಯರು ಚುನಾವಣೆಗೆ ನಿಂತಿದ್ದಾರೆ. ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರ ಪ್ರವೇಶ ಅತ್ಯಂತ ಕಡಿಮೆಯಿರುವುದರಿಂದ ಚುನಾವಣೆಗೆ ನಿಲ್ಲುವ ಮಹಿಳಾ ಅಭ್ಯರ್ಥಿಗೆ ಪ್ರತಿಸ್ಪರ್ಧಿಗಳು ಕಡಿಮೆ. ಇದರಿಂದಾಗಿ ಹೆಚ್ಚಿನ ಮಹಿಳೆಯರು ಅವಿರೋಧವಾಗಿ ಆಯ್ಕೆಯಾಗಿದ್ದಾರೆ. ನಮ್ಮ ಮಾಹಿತಿದಾರರಲ್ಲಿ ಶೇ.೬೭.೧೪ರಷ್ಟು ಮಹಿಳೆಯರು ಗ್ರಾಮ ಪಂಚಾಯತಿಗೆ ಅವಿರೋಧವಾಗಿ ಆಯ್ಕೆಯಾಗಿದ್ದಾರೆ. ಉಳಿದವರು (ಶೇ. ೩೨.೮೬) ಚುನಾವಣೆಯಲ್ಲಿ ಗೆದ್ದು ಆಯ್ಕೆಗೊಂಡಿದ್ದಾರೆ. ಹಿಂದುಳಿದ ವರ್ಗಕ್ಕೆ ಸೇರಿದ ಮಹಿಳಾ ಸದಸ್ಯೆಯರಲ್ಲಿ ಅವಿರೋಧವಾಗಿ ಆಯ್ಕೆಗೊಂಡವರ ಪ್ರಮಾಣ ಶೇ. ೭೪.೦೭, ಪರಿಶಿಷ್ಟ ಜಾತಿಯಲ್ಲಿ ಶೇ. ೬೬.೬೬ ಮತ್ತು ಪರಿಶಿಷ್ಟ ಪಂಗಡದಲ್ಲಿ ಶೇ. ೬೯.೨೩ ಇದ್ದಾರೆ.

ಚುನಾಯಿತ ಮಹಿಳಾ ಸದಸ್ಯೆಯರು ಗ್ರಾಮಾಂತರ ಪ್ರದೇಶದಲ್ಲಿ ಸಾಮಾಜಿಕ ಬದಲಾವಣೆಯ ನಿಯೋಗಿಗಳಾಗಿ ಪಾತ್ರವಹಿಸಬಲ್ಲರು. ಇದರಿಂದ ಚುನಾಯಿತ ಮಹಿಳಾ ಸದಸ್ಯೆಯರ ಸಾಮಾಜಿಕ ಸ್ಥಾನಮಾನ ಉತ್ತಮವಾಗುತ್ತದೆ. ನಮ್ಮ ಅಧ್ಯಯನದಲ್ಲಿನ ೭೦ ಮಹಿಳಾ ಸದಸ್ಯೆಯರಲ್ಲಿ ಶೇ. ೯೭.೧೪ರಷ್ಟು ಮಹಿಳೆಯರ ಸಾಮಾಜಿಕ ಸ್ಥಾನಮಾನವು ಉತ್ತಮಗೊಂಡಿರುವುದು ಕಂಡು ಬಂದಿದೆ. ಸಾಮಾಜಿಕ ಸ್ಥಾನಮಾನ ಉತ್ತಮಗೊಂಡಿದೆ ಎನ್ನುವ ಸದಸ್ಯೆಯರಲ್ಲಿ ಶೇ. ೨೪.೨೯ ರಷ್ಟು ಮಹಿಳೆಯರು ತಮಗೆ ಜನರು ಹೆಚ್ಚಿನ ಗೌರವ ಕೊಡುತ್ತಾರೆ ಎಂದೂ, ಕುಟುಂಬಗಳಲ್ಲಿ ಗೌರವ ದೊರೆಯುತ್ತದೆಯೆಂದು ಶೇ. ೧೫.೨೭ರಷ್ಟು ಹಾಗೂ ಶೇ.೨೦ರಷ್ಟು ಸರ್ಕಾರಿ ಕಛೇರಿಗಳಲ್ಲಿ ಗೌರವ ದೊರೆಯುತ್ತಿದೆಯೆಂದೂ ತಿಳಿಸಿದ್ದಾರೆ.

ಗ್ರಾಮ ಪಂಚಾಯತಿಯ ಕಾರ್ಯ ಸಮರ್ಥವಾಗಿ ನಡೆಯಲು ಅವುಗಳ ಸದಸ್ಯೆಯರು ಕ್ರಿಯಾಶೀಲರಾಗಿ ಪಂಚಾಯತಿ ಕಛೇರಿಯಲ್ಲಿ ಭಾಗವಹಿಸಬೇಕು. ದಿನಕ್ಕೊಮ್ಮೆಯಾದರೂ ಕಛೇರಿಗೆ ಭೇಟಿಕೊಡಬೇಕು. ಆದರೆ ನಮ್ಮ ಅಧ್ಯಯನದ ನಮೂನೆಯಲ್ಲಿರುವ ೭೦ ಮಹಿಳಾ ಸದಸ್ಯೆಯರಲ್ಲಿ ಶೇ. ೯೭.೧೪ರಷ್ಟು ಮಹಿಳಾ ಸದಸ್ಯೆಯರು ತಿಂಗಳಿಗೊಮ್ಮೆ ಪಂಚಾಯತಿ ಕಛೇರಿಗೆ ಭೇಟಿಕೊಡುವುದಾಗಿ ಹೇಳಿದ್ದಾರೆ. ಪ್ರತಿದಿನ ಭೇಟಿಕೊಡುವವರು ಯಾರೂ ಇಲ್ಲ.

ಚುನಾಯಿತ ಮಹಿಳೆಯರಲ್ಲಿ ಶೇ. ೩೫.೨೨ರಷ್ಟು ಮಹಿಳಾ ಸದಸ್ಯೆಯರು ತಾವು ಆಯ್ಕೆಯಾದ ಮೇಲೆ ತಮ್ಮ ಚುನಾವಣಾ ಕ್ಷೇತ್ರದ ಅಭಿವೃದ್ಧಿಗಾಗಿ ಯಾವುದೇ ಕಾರ್ಯಕ್ರಮವನ್ನು ಪಡೆದುಕೊಳ್ಳುವಲ್ಲಿ ಸಾಧ್ಯವಾಗಿಲ್ಲವೆಂದು ಹೇಳಿದ್ದಾರೆ. ಗ್ರಾಮ ಪಂಚಾಯತಿಯ ಮುಖ್ಯ ಕಾರ್ಯವಾದ ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಫಲಾನುಭವಿಗಳನ್ನು ಆಯ್ಕೆ ಮಾಡುವ ಪ್ರಕ್ರಿಯೆಯಲ್ಲಿ ಯಾವುದೇ ಮಹಿಳಾ ಸದಸ್ಯೆಯರು ಭಾಗವಹಿಸುತ್ತಿಲ್ಲ. ತಮ್ಮ ಚುನಾವಣಾ ಕ್ಷೇತ್ರದ ಜನರ ಯಾವುದೇ ಬೇಡಿಕೆಯನ್ನೂ ಪೂರೈಸಲು ಸಾಧ್ಯವಾಗಿಲ್ಲವೆಂದು ಶೇ.೩೫ ಮಹಿಳಾ ಸದಸ್ಯೆಯರು ಹೇಳಿದ್ದಾರೆ. ಗ್ರಾಮಸ್ಥರ ಬೇಡಿಕೆಗಳನ್ನು ಪೂರೈಸಿರುವುದಾಗಿ ಕೇವಲ ಶೇ. ೮.೫೮ರಷ್ಟು ಮಹಿಳಾ ಸದಸ್ಯೆಯರು ಹೇಳಿದ್ದಾರೆ. ಗ್ರಾಮಸ್ಥರ ಬೇಡಿಕೆಗಳನ್ನು ಪೂರೈಸಲು ಗ್ರಾಮ ಪಂಚಾಯತಿಯ ಅಧ್ಯಕ್ಷರು ಸಹಕರಿಸುತ್ತಿಲ್ಲವೆಂದು ಶೇ.೮.೫೭ರಷ್ಟು ಮಹಿಳಾ ಸದಸ್ಯೆಯರು ಹೇಳಿದರೆ, ಗ್ರಾಮ ಪಂಚಾಯತಿಯ ಪುರುಷ ಸದಸ್ಯರು ಅಡ್ಡಿಯಾಗಿದ್ದಾರೆಂದು ಶೇ. ೪೧.೪೨ರಷ್ಟು ಮಹಿಳಾ ಸದಸ್ಯೆಯರು ಹೇಳಿದ್ದಾರೆ.

## ಭಾಗ ೨

## ಅಧ್ಯಯನದ ಫಲಿತಗಳು

ನಮ್ಮ ಅಧ್ಯಯನದಿಂದ ಕಂಡುಕೊಂಡ ಮುಖ್ಯ ಫಲಿತಗಳನ್ನು ಇಲ್ಲಿ ನೀಡಲಾಗಿದೆ. ಈ ಹಿಂದೆ ಹೇಳಿರುವಂತೆ ನಮ್ಮ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿರುವ ಗ್ರಾಮ ಪಂಚಾಯತಿಗಳ ೭೦ ಮಹಿಳಾ ಸದಸ್ಯೆಯರುಗಳ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯು ವಿಭಿನ್ನವಾಗಿದೆ. ಮಾಹಿತಿದಾರ ಮಹಿಳೆಯರ ವಯೋಮಾನವನ್ನು ನೋಡಿದರೆ ಚುನಾಯಿತ ಮಹಿಳೆಯರಲ್ಲಿ ಶೇ. ೯೦ರಷ್ಟು ೨೬ ರಿಂದ ೩೫ ವರ್ಷಗಳ ವಯೋಮಾನದ ಗುಂಪಿನಲ್ಲಿರುವುದು ತಿಳಿದು ಬಂದಿದೆ. ಆದರೆ ೧೮ ರಿಂದ ೨೫ ವರ್ಷಗಳ ವಯೋಮಾನ ಗುಂಪಿನಲ್ಲಿನ ಮಹಿಳೆಯರಲ್ಲಿ ಗ್ರಾಮ ಪಂಚಾಯತಿಗೆ ಆಯ್ಕೆಯಾದವರ ಪ್ರಮಾಣ ಕೇವಲ ಶೇ.೧.೪೨.ಗ್ರಾಮ ಪಂಚಾಯತಿಗೆ ಆಯ್ಕೆಗೊಂಡ ಮಹಿಳಾ ಸದಸ್ಯೆಯರಲ್ಲಿ ೪೫ ವರ್ಷ ಮೀರಿದವರ ಪ್ರಮಾಣ ಶೇ. ೮.೫೮.

ಇದರಿಂದ ಹೊರಬರುವ ಫಲಿತವೆಂದರೆ ನಮ್ಮ ಸಮಾಜದಲ್ಲಿ ಅವಿವಾಹಿತ ಹೆಣ್ಣು ಮಕ್ಕಳು ಗ್ರಾಮಾಂತರ ಪ್ರದೇಶದಲ್ಲಿ ಚುನಾವಣೆಗೆ ನಿಲ್ಲುತ್ತಿಲ್ಲ. ಕುಟುಂಬದ ಜವಾಬ್ದಾರಿ ಅಧಿಕವಾಗಿರುವುದರಿಂದ ೪೫ ವರ್ಷ ಮೀರಿದವರು ಚುನಾವಣೆಗಳಲ್ಲಿ ಭಾಗವಹಿಸುವುದು ಕಡಿಮೆ. ಆದ್ದರಿಂದ ನಮ್ಮ ನಮೂನೆಯಲ್ಲಿ ಶೇ.೯೦ರಷ್ಟು ಮಹಿಳಾ ಸದಸ್ಯೆಯರು ಮಧ್ಯ ವಯಸ್ಕರಾಗಿದ್ದಾರೆ.

ಪ್ರಜಾಪ್ರಭುತ್ವದ ಯಶಸ್ಸು ಅಥವಾ ವೈಫಲ್ಯವು ಜನರ ಶಿಕ್ಷಣ ಮಟ್ಟವನ್ನು ಅವಲಂಭಿಸಿದೆ. ಅದರಲ್ಲೂ ಮಹಿಳೆಯರ ಶಿಕ್ಷಣವು ತುಂಬಾ ನಿರ್ಣಾಯಕವಾದುದಾಗಿದೆ. ಆದರೆ ನಮ್ಮ ಅಧ್ಯಯನದ ನಮೂನೆಯಲ್ಲಿ ಶೇ. ೫೮.೫೭ರಷ್ಟು ಚುನಾಯಿತ ಮಹಿಳಾ ಸದಸ್ಯೆಯರು ಅನಕ್ಷರಸ್ಥರಾಗಿದ್ದಾರೆ. ಇವರಿಗೆ ಕಛೇರಿಯ ಸುತ್ತೋಲೆಗಳನ್ನಾಗಲಿ ಸರ್ಕಾರಿ ಆದೇಶಗಳನ್ನಾಗಲಿ ಓದಲು ಬರುವುದಿಲ್ಲ. ಅನಕ್ಷರಸ್ಥ ಮಹಿಳಾ ಸದಸ್ಯೆಯರು ಪರಿಣಾಮಕಾರಿಯಾಗಿ ನಿರ್ಣಯಗಳನ್ನು ಮಂಡಿಸುವುದಕ್ಕಾಗಿ ಅಥವಾ ನಿರ್ಧಾರ ತೆಗೆದುಕೊಳ್ಳುವುದಕ್ಕಾಗಲಿ ಸಾಧ್ಯವಿಲ್ಲವಾಗಿದೆ. ಅಕ್ಷರಸ್ಥ ಮಹಿಳಾ ಸದಸ್ಯೆಯರಲ್ಲಿ ಶೇ ೪೧.೪೩ ರಷ್ಟು ಮಹಿಳಾ ಸದಸ್ಯೆಯರು ಪ್ರಾಥಮಿಕ ಮತ್ತು ಪ್ರೌಢ ಶಾಲಾ ಶಿಕ್ಷಣ ಪಡೆದಿದ್ದಾರೆ. ಗ್ರಾಮ ಪಂಚಾಯತಿಗಳ ಅಧ್ಯಕ್ಷರಾಗಿ ಆಯ್ಕೆಯಾದ ಕೆಲವು ಮಹಿಳಾ ಸದಸ್ಯೆಯರೂ ಅನಕ್ಷರಸ್ಥರಾಗಿದ್ದಾರೆ. ಅನಕ್ಷರಸ್ಥ ಮಹಿಳಾ ಅಧ್ಯಕ್ಷರು ಹಾಗೂ ಸದಸ್ಯೆಯರು ಪುರುಷರ ಮತ್ತು ಅಧಿಕಾರಿಗಳ ಕೈಗೊಂಬೆಗಳಾಗಿ ಬಿಡುವ ಅಪಾಯವಿದೆ.

ಏಣಿ ಶ್ರೇಣಿ ಹಾಗೂ ಜಾತಿ ವ್ಯವಸ್ಥೆಯಿಂದ ಕೂಡಿದ ನಮ್ಮ ಸಮಾಜದಲ್ಲಿ ವಿವಿಧ ಜಾತಿ ವರ್ಗಗಳಿಗೆ ಗ್ರಾಮ ಪಂಚಾಯತಿಗಳಲ್ಲಿ ಮೀಸಲಾತಿ ಸೌಲಭ್ಯವಿದೆ. ಇದರಿಂದಾಗಿ ಸಮಾಜದ ವಿವಿಧ ಜಾತಿ ವರ್ಗ

ಪಂಗಡಗಳಿಗೆ ಸೇರಿದವರು ಗ್ರಾಮ ಪಂಚಾಯತಿಗಳಿಗೆ ಆಯ್ಕೆಯಾಗುತ್ತಿದ್ದಾರೆ. ನಮ್ಮ ಅಧ್ಯಯನದ ನಮೂನೆಯಲ್ಲಿನ ೭೦ ಮಹಿಳಾ ಸದಸ್ಯೆಯರುಗಳಲ್ಲಿ ಶೇ. ೨೧.೪೨ರಷ್ಟು ಸಾಮಾನ್ಯ ವರ್ಗಕ್ಕೆ ಸೇರಿದ್ದಾರೆ. ಉಳಿದ ಶೇ. ೭೮.೫೮ರಷ್ಟು ಮಹಿಳಾ ಸದಸ್ಯೆಯರು ವಿವಿಧ ಹಿಂದುಳಿದ ಜಾತಿ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ ಸೇರಿದವರಾಗಿದ್ದಾರೆ. ಇದರಿಂದಾಗಿ ಸಮಾಜದ ವಿವಿಧ ವರ್ಗ-ಜಾತಿಗಳಿಗೆ ಗ್ರಾಮ ಪಂಚಾಯತಿಯಲ್ಲಿ ಪ್ರಾತಿನಿಧ್ಯ ಸಿಗುವಂತಾಗಿದೆ. ಜಾತಿಯಾಧರಿತ ಮೀಸಲಾತಿಯಿಂದಾಗಿ ಜಾತಿ ಆಧರಿತ ಒತ್ತಡದ ಗುಂಪುಗಳು ರೂಪುಗೊಳ್ಳುತ್ತಿವೆ.

ನಮ್ಮ ನಮೂನೆಯಲ್ಲಿರುವ ೭೦ ಮಹಿಳಾ ಸದಸ್ಯೆಯರಲ್ಲಿ ಶೇ. ೮೦ರಷ್ಟು ದುರ್ಬಲ ವರ್ಗಕ್ಕೆ ಸೇರಿದವರಾಗಿದ್ದಾರೆ. ಇವರೆಲ್ಲರ ಕೌಟುಂಬಿಕ ವರಮಾನ ಬಹಳ ಕಡಿಮೆ. ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳಿಗೆ ಸೇರಿದ ಶೇ. ೩೩ ರಷ್ಟು ಮಹಿಳೆಯರು ಗ್ರಾಮ ಪಂಚಾಯತಿಗಳಿಗೆ ಆಯ್ಕೆಯಾಗಿದ್ದಾರೆ. ಇವರೆಲ್ಲರೂ ಕಡು ಬಡವ ಕುಟುಂಬಕ್ಕೆ ಸೇರಿದವರಾಗಿದ್ದಾರೆ. ನಮ್ಮ ಅಧ್ಯಯನದ ನಮೂನೆಯಲ್ಲಿ ಶೇ. ೬೫ಕ್ಕೂ ಹೆಚ್ಚಿನ ಮಹಿಳಾ ಸದಸ್ಯೆಯರುಗಳ ವಾರ್ಷಿಕ ವರಮಾನವು ೮,೦೦೦ ರೂಪಾಯಿಗಳಿಗಿಂತ ಕಡಿಮೆಯಿದೆ.

ಚುನಾಯಿತ ಮಹಿಳಾ ಸದಸ್ಯೆಯರುಗಳ ಗಂಡಂದಿರ ಪಾತ್ರವನ್ನು ಗುರುತಿಸಲು ನಮ್ಮ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ. ಮೀಸಲಾತಿ ನಿಯಮದಿಂದಾಗಿ ಅನೇಕ ಪುರುಷರು ಅವಕಾಶ ಕಳೆದುಕೊಂಡಿದ್ದಾರೆ. ಈ ಪುರುಷರು ತಮ್ಮ ರಾಜಕೀಯ ಆಕಾಂಕ್ಷೆಗಳಿಗಾಗಿ ತಮ್ಮ ಪತ್ನಿಯರನ್ನೂ, ಹೆಣ್ಣುಮಕ್ಕಳನ್ನೂ ಬಳಸಿಕೊಳ್ಳುವುದು ಕಂಡು ಬಂದಿದೆ. ಹೀಗೆ ಆಯ್ಕೆಗೊಂಡ ಮಹಿಳಾ ಸದಸ್ಯೆಯರುಗಳ ಗಂಡಂದಿರು ಹಾಗೂ ಅಪ್ಪಂದಿರು ಅವರ ಪರವಾಗಿ ಗ್ರಾಮ ಪಂಚಾಯತಿ ಆಡಳಿತದಲ್ಲಿ ಹಸ್ತಕ್ಷೇಪ ನಡೆಸುತ್ತಿರುವುದು ವ್ಯಾಪಕವಾಗಿದೆ ಎಂಬುದು ನಮ್ಮ ಅಧ್ಯಯನದಿಂದ ತಿಳಿದು ಬಂದಿದೆ. ಇದರಿಂದಾಗಿ ರಾಜಕೀಯ ಕ್ಷೇತ್ರಕ್ಕೆ ಮಹಿಳೆಯರ ಪ್ರವೇಶವು ಕೇವಲ 'ನಾಮ ಮಾತ್ರ' ವಾಗಿದೆಯೆ ವಿನಾ 'ಕ್ರಿಯಾ ಶೀಲ' ವಾಗಿಲ್ಲ. ಇದಕ್ಕೆ ನಮಗೆ ಕಂಡು ಬಂದ ಮೂಲ ಕಾರಣ ಮಹಿಳಾ ಸದಸ್ಯೆಯರ ಅನಕ್ಷರತೆ. ಗ್ರಾಮಪಂಚಾಯತಿಯ ಕಾರ್ಯ ವೈಖರಿಯ ಬಗ್ಗೆ ಸ್ವಲ್ಪವೂ ಗೊತ್ತಿಲ್ಲದ ಮಹಿಳಾ ಸದಸ್ಯೆಯರು ಸುಲಭವಾಗಿ ತಮ್ಮ ಗಂಡಂದಿರು ಹೇಳಿದ ಹಾಗೆ ಕೇಳತೊಡಗುತ್ತಾರೆ.

ಈ ಅಧ್ಯಯನದಿಂದ ಹೊರ ಬಂದ ಬಹುಮುಖ್ಯವಾದೊಂದು ತಥ್ಯವೆಂದರೆ ಚುನಾಯಿತ ಮಹಿಳಾ ಸದಸ್ಯೆಯರ ಮಕ್ಕಳ ಶಿಕ್ಷಣ ತುಂಬಾ ಉತ್ತಮವಾಗಿದೆ. ನಮ್ಮ ನಮೂನೆಯಲ್ಲಿರುವ ಮಹಿಳಾ ಸದಸ್ಯೆಯರ ಶಿಕ್ಷಣ ಮಟ್ಟಕ್ಕೆ ಹೋಲಿಸಿದರೆ ಅವರ ಮಕ್ಕಳ ಶಿಕ್ಷಣದ ಮಟ್ಟ ಉತ್ತಮವಾಗಿದೆ ಹಾಗೂ ಉನ್ನತವಾಗಿದೆ. ಕೆಲವು

ಚುನಾಯಿತ ಮಹಿಳಾ ಸದಸ್ಯೆಯರ ಮಕ್ಕಳು ಕಾಲೇಜು ಶಿಕ್ಷಣದ ಮಟ್ಟಕ್ಕೇರಿದ್ದಾರೆ. ಚುನಾಯಿತ ಮಹಿಳಾ ಸದಸ್ಯೆಯರ ಮಕ್ಕಳೆಲ್ಲರೂ ಶಾಲೆಗಳಿಗೆ ಹೋಗುತ್ತಿರುವುದು ಸ್ವಾಗತಾರ್ಹ.

ನಮ್ಮ ಈ ಪ್ರೌಢ ಅಧ್ಯಯನದ ನಾಲ್ಕನೆ ಅಧ್ಯಾಯದಲ್ಲಿ ಗ್ರಾಮಸಭೆಗಳಲ್ಲಿ ಚುನಾಯಿತ ಮಹಿಳಾ ಸದಸ್ಯೆಯರ ಸಹಭಾಗಿತ್ವ ಹಾಗೂ ಗ್ರಾಮಸಭೆಯಿಂದ ಉಂಟಾಗುತ್ತಿರುವ ಪ್ರಯೋಜನಗಳನ್ನು ಕುರಿತದ್ದಾಗಿದೆ. ಪ್ರತಿಯೊಂದು ಗ್ರಾಮ ಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಪ್ರತಿಯೊಂದು ಗ್ರಾಮಗಳಲ್ಲೂ ಗ್ರಾಮಸಭೆಗಳಿರಬೇಕು. ಅಲ್ಲಿ ಗ್ರಾಮಕ್ಕೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಚರ್ಚೆ ನಡೆಯಬೇಕು. ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಜನರು ಸಹಭಾಗಿಗಳಾಗಬೇಕು ಎಂದು ಸರ್ಕಾರ ಹೇಳುತ್ತಿದೆ. ಅಭಿವೃದ್ಧಿಯಲ್ಲಿ ಜನರ ಸಹಭಾಗಿತ್ವಕ್ಕೆ ಗ್ರಾಮ ಸಭೆಯು ಉತ್ತಮ ಸಾಧನವಾಗಿದೆ. ಗ್ರಾಮಸ್ಥರು ತಾವು ಚುನಾಯಿಸಿದ ಗ್ರಾಮ ಪಂಚಾಯತಿ ಸದಸ್ಯರಿಗೆ ಗ್ರಾಮದ ಸಮಸ್ಯೆಗಳನ್ನು, ಅದಕ್ಕೆ ಪರಿಹಾರಗಳನ್ನು ತಿಳಿಸಲು ಗ್ರಾಮಸಭೆಯು ಒಂದು ವೇದಿಕೆಯಾಗಿದೆ.

ಚುನಾಯಿತ ಸದಸ್ಯರು ಗ್ರಾಮಸಭೆಗಳಲ್ಲಿ ನಿಯಮಿತವಾಗಿ ಹಾಗೂ ಕ್ರಿಯಾಶೀಲವಾಗಿ ಭಾಗವಹಿಸಬೇಕು. ನಮ್ಮ ಅಧ್ಯಯನದ ನಮೂನೆಯಲ್ಲಿನ ೭೦ ಮಹಿಳಾ ಸದಸ್ಯೆಯರುಗಳಲ್ಲಿ ಶೇ. ೭೫ ರಷ್ಟು ಮಂದಿ ಗ್ರಾಮಸಭೆಗಳಲ್ಲಿ ಭಾಗವಹಿಸುತ್ತಿಲ್ಲ. ಆಶ್ಚರ್ಯಕರ ಸಂಗತಿಯೆಂದರೆ ನಮ್ಮ ನಮೂನೆಯಲ್ಲಿನ ೭೦ ಮಹಿಳಾ ಸದಸ್ಯೆಯರಲ್ಲಿ ಶೇ.೧೦ರಷ್ಟು ಮಹಿಳೆಯರಿಗೆ ಗ್ರಾಮಸಭೆ ಬಗ್ಗೆ ಯಾವುದೇ ವಿಚಾರ ಗೊತ್ತಿಲ್ಲವಿರುವುದು. ಅನಕ್ಷರತೆ ಹಾಗೂ ರಾಜಕೀಯದ ಬಗ್ಗೆ ಔದಾಸೀನ್ಯ ಮನೋಭಾವ ಹಾಗೂ ನಿರಾಸಕ್ತಿಗಳೇ ಕಾರಣಗಳಾಗಿವೆ. ಗ್ರಾಮ ಸಭೆಗಳಿಗೆ ಮಹಿಳಾ ಸದಸ್ಯೆಯರು ಹಾಜರಾದರೂ ಸಹ ಅವರು ತಮ್ಮ ಸಮಸ್ಯೆಗಳನ್ನು, ಅಭಿಪ್ರಾಯಗಳನ್ನು ಹೇಳಿಕೊಳ್ಳಲು ಅಶಕ್ತರಾಗಿದ್ದಾರೆ. ನಮ್ಮ ನಮೂನೆಯಲ್ಲಿರುವ ಮಹಿಳೆಯರಲ್ಲಿ ಅನೇಕರು ಪಂಚಾಯತಿ ಸಭೆಗಳಲ್ಲಿ ತಮ್ಮ ಅಹವಾಲುಗಳನ್ನು, ದೂರುಗಳನ್ನು ಮಂಡಿಸುತ್ತಿಲ್ಲ.

ಗ್ರಾಮ ಪಂಚಾಯತಿಯ ಸದಸ್ಯರು ಅನಕ್ಷರಸ್ಥರಾಗಿದ್ದರೆ ಆ ಗ್ರಾಮ ಪಂಚಾಯತಿ ಆಡಳಿತದ ಉಸ್ತುವಾರಿಯನ್ನು ಸರ್ಕಾರಿ ಅಧಿಕಾರಿ ನೋಡಿಕೊಳ್ಳುತ್ತಾನೆ. ಕಾಯಿದೆ, ಕಾನೂನು, ಸುತ್ತೋಲೆ ಆದೇಶಗಳ ಬಗ್ಗೆ ಸದಸ್ಯರಿಗೆ ಅಧಿಕಾರಿ ತಿಳಿಸುತ್ತಾನೆ. ಗ್ರಾಮ ಪಂಚಾಯತಿಯ ಕಾರ್ಯನಿರ್ವಹಣೆಯಲ್ಲಿ ಸರ್ಕಾರಿ ಅಧಿಕಾರಿಯ ಪಾತ್ರ ತುಂಬಾ ಮುಖ್ಯವಾದುದು. ಅನೇಕ ವೇಳೆ ಅವನ/ಅವಳ ಸಲಹೆ ಮೇರೆಗೆ ಸದಸ್ಯರು ಕಾರ್ಯ ನಿರ್ವಹಿಸುತ್ತಾರೆ. ನಮ್ಮ ಅಧ್ಯಯನದ ನಮೂನೆಯಲ್ಲಿನ ಮಹಿಳಾ ಸದಸ್ಯೆಯರಲ್ಲಿ ಶೇ.೩೫ರಷ್ಟು ಮಹಿಳೆಯರು ಸರ್ಕಾರಿ ಸಿಬ್ಬಂದಿ ಬಗ್ಗೆ, ಅವರ ಕಾರ್ಯನಿರ್ವಹಣೆ ಬಗ್ಗೆ, ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ನಾವು ಸಂದರ್ಶಿಸಿದ

ಸರ್ಕಾರಿ ಅಧಿಕಾರಿಗಳಲ್ಲಿ ಕೆಲವರು ಸದಸ್ಯರ ಸಹಕಾರದ ಬಗ್ಗೆ ಮೆಚ್ಚಿಗೆ ಸೂಚಿಸಿದರು. ಆದರೆ ಕೆಲವು ಅಧಿಕಾರಿಗಳು ಮಹಿಳೆಯರಿಗೆ ರಾಜಕೀಯ ಅಧಿಕಾರ ನೀಡುವುದರ ಬಗ್ಗೆ ವಿರೋಧ ವ್ಯಕ್ತಪಡಿಸಿದರು.

ಗ್ರಾಮ ಸಭೆಗಳಲ್ಲಿ ಭಾಗವಹಿಸುವ ಮಹಿಳಾ ಸದಸ್ಯೆಯರುಗಳಿಗೆ ಪುರುಷ ಸದಸ್ಯರು ಸಹಕಾರ ನೀಡುತ್ತಿರುವುದೂ ಕೂಡ ನಮ್ಮ ಅಧ್ಯಯನದಿಂದ ಕಂಡು ಬಂದಿದೆ. ಆದರೆ ಅನೇಕ ಗ್ರಾಮಸ್ಥರು ತಮ್ಮ ಊರಿನ ಚುನಾಯಿತ ಮಹಿಳಾ ಸದಸ್ಯೆಯರಿಂದ ಯಾವುದೇ ಪ್ರಯೋಜನವಾಗಿಲ್ಲವೆಂದು ಹೇಳಿದರು.

ನಮ್ಮ ಅಧ್ಯಯನದ ಐದನೆ ಅಧ್ಯಾಯದಲ್ಲಿ ನಾವು ನಮ್ಮ ನಮೂನೆಯಲ್ಲಿರುವ ಮಹಿಳಾ ಸದಸ್ಯೆಯರು ಆಯ್ಕೆಯಾದ ಪರಿ, ಅವರ ಕಾರ್ಯವೈಖರಿ ಮುಂತಾದ ವಿವರಗಳನ್ನು ನೀಡಲಾಗಿದೆ. ನಮ್ಮ ಅಧ್ಯಯನದ ನಮೂನೆಯಲ್ಲಿನ ೭೦ ಮಹಿಳಾ ಸದಸ್ಯೆಯರುಗಳಲ್ಲಿ ಬಹುಪಾಲು ಮಹಿಳೆಯರು ಸ್ವ ಇಚ್ಛೆಯಿಂದ ರಾಜಕೀಯ ಪ್ರವೇಶಿಸಿಲ್ಲವೆಂಬುದು ನಮ್ಮ ಅಧ್ಯಯನದಿಂದ ತಿಳಿದು ಬಂದಿದೆ. ಅನ್ಯರ ಒತ್ತಡ - ಒತ್ತಾಯದಿಂದಲೇ ಅನೇಕ ಮಹಿಳೆಯರು ಗ್ರಾಮಪಂಚಾಯತಿಗಳಿಗೆ ಆಯ್ಕೆಯಾಗಿದ್ದಾರೆ. ಇದೇ ಕಾರಣದಿಂದ ಆಯ್ಕೆಯಾದ ಮಹಿಳಾ ಸದಸ್ಯೆಯರಲ್ಲಿ ಅವಿರೋಧವಾಗಿ ಆಯ್ಕೆಯಾದವರು ಅಧಿಕವಾಗಿದ್ದಾರೆ. ಅವಿರೋಧವಾಗಿ ಆಯ್ಕೆಯಾದ ಮಹಿಳಾ ಸದಸ್ಯೆಯರಲ್ಲಿ ಹಿಂದುಳಿದ ವರ್ಗದ ಮಹಿಳೆಯರು ಅಧಿಕವಾಗಿದ್ದಾರೆ. ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದವರಲ್ಲಿ ಅವಿರೋಧವಾಗಿ ಆಯ್ಕೆಯಾದವರ ಪ್ರಮಾಣವು ಸಾಕಷ್ಟಿದೆ. ಸಾಮಾನ್ಯ ವರ್ಗದವರಲ್ಲಿ ಅವಿರೋಧವಾಗಿ ಹಾಗೂ ಚುನಾವಣೆ ಮೂಲಕ ಆಯ್ಕೆಯಾದವರು ಸಮಸಮವಾಗಿದ್ದಾರೆ. ಹಿಂದುಳಿದ ವರ್ಗದಲ್ಲಿ ರಾಜಕೀಯಕ್ಕೆ ಪ್ರವೇಶಿಸುವ ಇಚ್ಛೆಯುಳ್ಳ ಮಹಿಳೆಯರ ಸಂಖ್ಯೆ ಕಡಿಮೆ. ಇದರಿಂದಾಗಿ ಈ ವರ್ಗದಲ್ಲಿ ಅವಿರೋಧವಾಗಿ ಆಯ್ಕೆಯಾದವರ ಪ್ರಮಾಣ ಅಧಿಕವಿದೆ.

ರಾಜಕೀಯ ಪ್ರವೇಶದಿಂದ ವ್ಯಕ್ತಿಗಳಿಗೆ ವಿಶಿಷ್ಟ ಸ್ಥಾನಮಾನ ಪ್ರಾಪ್ತವಾಗುತ್ತದೆ. ನಮ್ಮ ನಮೂನೆಯಲ್ಲಿನ ಮಹಿಳಾ ಸದಸ್ಯೆಯರು ಇದನ್ನು ಒಪ್ಪಿಕೊಂಡಿದ್ದಾರೆ. ಗ್ರಾಮ ಪಂಚಾಯತಿಗೆ ಆಯ್ಕೆಯಾದ ಮಹಿಳಾ ಸದಸ್ಯೆಯರ ಗೌರವ, ಪ್ರತಿಷ್ಠೆ ಸಮಾಜದಲ್ಲಿ ಉತ್ತಮಗೊಂಡಿದೆ. ಇದೊಂದು ಆಶಾದಾಯಕ ಅಂಶವಾಗಿದೆ. ಇದರಿಂದಾಗಿ ಮುಂದಿನ ಚುನಾವಣೆಗಳಲ್ಲಿ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ರಾಜಕೀಯ ಪ್ರವೇಶಿಸಬಹುದು.

ಚುನಾಯಿತ ಮಹಿಳಾ ಸದಸ್ಯೆಯರು ಪ್ರತಿನಿತ್ಯ ಗ್ರಾಮ ಪಂಚಾಯತಿ ಕಛೇರಿಗೆ ಭೇಟಿ ನೀಡುವುದು ಒಳ್ಳೆಯದು. ಏಕೆಂದರೆ ಜನರು ತಮ್ಮ ಬೇಡಿಕೆಗಳನ್ನು ಸದಸ್ಯೆಯರ ಗಮನಕ್ಕೆ ತರಬಹುದು. ಅವರಿಂದ ಪರಿಹಾರವನ್ನು ಬಯಸಬಹುದು. ಆದರೆ ನಮ್ಮ ಅಧ್ಯಯನದ ನಮೂನೆಯಲ್ಲಿನ ೭೦ ಮಹಿಳಾ ಸದಸ್ಯೆಯರಲ್ಲಿ

ಶೇ. ೯೭.೧೫ರಷ್ಟು ಮಹಿಳಾ ಸದಸ್ಯೆಯರು ತಿಂಗಳಿಗೊಮ್ಮೆ ಮಾತ್ರ ಕಛೇರಿಗೆ ಹಾಜರಾಗುತ್ತಿರುವುದು ತಿಳಿದು ಬಂದಿದೆ. ಇದರಿಂದಾಗಿ ಜನರು ತಮ್ಮ ಅಹವಾಲು ಹೇಳಿಕೊಳ್ಳಲು ಚುನಾಯಿತ ಸದಸ್ಯೆಯರ ಮನೆಬಾಗಿಲಿಗೆ ಅಲೆಯುವ ಪ್ರಮೇಯ ಬಂದು ಬಿಡುತ್ತದೆ.

ಗ್ರಾಮಗಳನ್ನು ಅಭಿವೃದ್ಧಿಪಡಿಸುವುದು ಗ್ರಾಮ ಪಂಚಾಯತಿಗಳ ಒಂದು ಮುಖ್ಯ ಕಾರ್ಯವಾಗಿದೆ. ಚುನಾಯಿತ ಸದಸ್ಯರ ಪಾತ್ರ ಇಲ್ಲಿ ನಿರ್ಣಾಯಕವಾದುದಾಗಿದೆ. ಆದರೆ ನಮ್ಮ ನಮೂನೆಯ ಮಹಿಳಾ ಸದಸ್ಯೆಯರುಗಳಲ್ಲಿ ಶೇ. ೩೫.೨೨ರಷ್ಟು ಮಹಿಳೆಯರು ಯಾವುದೇ ಅಭಿವೃದ್ಧಿ ಕಾರ್ಯವನ್ನು ಕೈಗೊಂಡಿಲ್ಲ. ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳಾದ ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆ, ಡ್ವಾಕ್ರಾ ಮುಂತಾದ ಕಾರ್ಯಕ್ರಮಗಳಿಗೆ ಫಲಾನುಭವಿಗಳನ್ನು ಗ್ರಾಮಸಭೆಗಳ ಮೂಲಕ ಆಯ್ಕೆ ಮಾಡುವ ಜವಾಬ್ದಾರಿ ಗ್ರಾಮ ಪಂಚಾಯತಿಯದ್ದಾಗಿದೆ. ಆದರೆ ನಮ್ಮ ಅಧ್ಯಯನದ ಮಹಿಳಾ ಸದಸ್ಯೆಯರುಗಳಲ್ಲಿ ಯಾರೊಬ್ಬರೂ ಫಲಾನುಭವಿಗಳ ಆಯ್ಕೆಯಲ್ಲಿ ಭಾಗವಹಿಸಿಲ್ಲ. ಪುರುಷ ಸದಸ್ಯರು ಮಾತ್ರ ಫಲಾನುಭವಿಗಳ ಆಯ್ಕೆಯಲ್ಲಿ ನೇರವಾಗಿ ಭಾಗವಹಿಸುತ್ತಿದ್ದಾರೆ. ನಾವು ಸಂದರ್ಶಿಸಿದ ಕೆಲವು ಮಹಿಳಾ ಸದಸ್ಯೆಯರುಗಳು ತಮ್ಮ ಕಾರ್ಯ ಚಟುವಟಿಕೆಗಳಿಗೆ ಗ್ರಾಮ ಪಂಚಾಯತಿಯ ಅಧ್ಯಕ್ಷರು ಮತ್ತು ಕೆಲವೊಮ್ಮೆ ಸದಸ್ಯರು ಅಡ್ಡಿ ಬರುತ್ತಿದ್ದಾರೆ ಎಂದು ದೂರಿದ್ದಾರೆ.

ಒಟ್ಟಾರೆ ನಮ್ಮ ಅಧ್ಯಯನದಿಂದ ರೂಪುಗೊಂಡ ಫಲಿತವೆಂದರೆ ಗ್ರಾಮ ಪಂಚಾಯತಿಗೆ ಆಯ್ಕೆಯಾದ ಮಹಿಳಾ ಸದಸ್ಯೆಯರಲ್ಲಿ ಅನಕ್ಷರತೆ ಪ್ರಮಾಣ ಅಧಿಕ. ಇವರಾರು ಗ್ರಾಮಸಭೆಗಳಿಗೆ ಹಾಜರಾಗುವುದಿಲ್ಲ. ಗ್ರಾಮಪಂಚಾಯತಿ ಕಛೇರಿಗೆ ಪ್ರತಿನಿತ್ಯ ಭೇಟಿ ನೀಡುವುದಿಲ್ಲ. ಗ್ರಾಮಸಭೆಗಳಲ್ಲಾಗಲಿ ಅಥವಾ ಗ್ರಾಮ ಪಂಚಾಯತಿಗಳಲ್ಲಾಗಲಿ ತಮ್ಮ ಅಧಿಕಾರವನ್ನು ಚಲಾಯಿಸುವಲ್ಲಿ ಮಹಿಳಾ ಸದಸ್ಯೆಯರು ವಿಫಲರಾಗಿದ್ದಾರೆ. ಆದರೆ ಚುನಾಯಿತ ಮಹಿಳಾ ಸದಸ್ಯೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನ ಉತ್ತಮಗೊಂಡಿರುವುದು ಸ್ಪಷ್ಟವಾಗಿದೆ.

**ಭಾಗ ೩**

**ಕೆಲವು ಸಲಹೆಗಳು**

ಸಂವಿಧಾನದ ೭೩ ಮತ್ತು ೭೪ನೇ ತಿದ್ದುಪಡಿಗಳು ಗ್ರಾಮೀಣ ಸ್ವಯಂ ಆಡಳಿತ ಸಂಸ್ಥೆಗಳನ್ನು ರೂಪಿಸುವಲ್ಲಿ ಹಾಗೂ ವಿಕೇಂದ್ರೀಕೃತ ವ್ಯವಸ್ಥೆ ಸ್ಥಾಪಿಸುವಲ್ಲಿ ಮಹತ್ವದ ಕ್ರಮವಾಗಿದೆ. ಸಮಾಜದ ಪ್ರಗತಿಯೊಂದು ಸ್ತರದಲ್ಲೂ ಸ್ವಾಯತ್ತತೆಯಿಂದ ಕೂಡಿದ ಸ್ವಯಂಮಾಡಳಿತ ಘಟಕವಿರಬೇಕು. ಆಡಳಿತ ಹಾಗೂ

ಅಭಿವೃದ್ಧಿಯಲ್ಲಿ ಜನರು ಸಹಭಾಗಿಗಳಾಗಬೇಕು. ಆಗ ಮಾತ್ರ ಅಭಿವೃದ್ಧಿ ಜನರನ್ನು ತಲುಪುತ್ತದೆ. ಅಭಿವೃದ್ಧಿ ಜನಮುಖಿಯಾಗುತ್ತದೆ. ಈ ಪ್ರಕ್ರಿಯೆಯಲ್ಲಿ ಮಹಿಳೆಯರ ಪಾತ್ರ ತುಂಬಾ ಮಹತ್ವವಾದುದಾಗಿದೆ. ಇತ್ತೀಚಿಗಿನವರೆಗೂ ಮಹಿಳೆಯರು ದೇಶದ ರಾಜಕೀಯ ಪ್ರವಾಹದಿಂದ ಹೊರಗುಳಿದಿದ್ದರು. ಈ ೭೩ ಮತ್ತು ೭೪ನೇ ಸಂವಿಧಾನ ತಿದ್ದುಪಡಿಯ ಮೂಲಕ ಕನಿಷ್ಠ ಗ್ರಾಮ, ತಾಲ್ಲೂಕು ಹಾಗೂ ಜಿಲ್ಲಾಮಟ್ಟದಲ್ಲಿ ಆಡಳಿತ ಹಾಗೂ ಅಭಿವೃದ್ಧಿಯಲ್ಲಿ ಮಹಿಳೆಯರು ಭಾಗವಹಿಸಲು ಅವಕಾಶ ಮಾಡಿಕೊಡಲಾಗಿದೆ. ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಶೇ. ೩೩ರಷ್ಟು ಮೀಸಲಾತಿಯನ್ನು ನೀಡಲಾಗಿದೆ. ವಾಸ್ತವವಾಗಿ ಸಂವಿಧಾನಾತ್ಮಕ ಮೀಸಲಾತಿಯಾದ ಶೇ. ೩೩ರ ಪ್ರಮಾಣವನ್ನು ಮೀರಿ ನಿಜವಾಗಿ ಮಹಿಳೆಯರು ಆಯ್ಕೆಯಾಗಿದ್ದಾರೆ.

ಆಡಳಿತಾತ್ಮಕವಾಗಿ, ರಾಚನಿಕವಾಗಿ ಹಾಗೂ ಸಂವಿಧಾನಾತ್ಮಕವಾಗಿ ಮಹಿಳೆಯರಿಗೆ ರಾಜಕೀಯದಲ್ಲಿ ಅವಕಾಶ ಮಾಡಿಕೊಡಲಾಗಿದೆ. ಆದರೆ ಕ್ರಿಯಾತ್ಮಕವಾಗಿ, ಆಚರಣಾತ್ಮಕವಾಗಿ ಈ ಕ್ರಮ ವಿಫಲವಾಗಿರುವುದು ನಮ್ಮ ಅಧ್ಯಯನದಿಂದ ಸ್ಪಷ್ಟವಾಗಿದೆ. ಮೀಸಲಾತಿ ಆಶ್ರಯದಲ್ಲಿ ಚುನಾಯಿತರಾದ ಮಹಿಳಾ ಸದಸ್ಯೆಯರು ಇಂದು ಕೇವಲ ಗ್ರಾಮಸ್ಥರನ್ನು ರಾಚನಿಕವಾಗಿ ಪ್ರತಿನಿಧಿಸುತ್ತಿದ್ದಾರೆ. ಆದರೆ ಕ್ರಿಯಾತ್ಮಕವಾಗಿ ಅವರ ಪಾತ್ರ ಶೂನ್ಯವಾಗಿದೆ.

ಯಾವ ಉದ್ದೇಶಗಳನ್ನು ಇಟ್ಟುಕೊಂಡು ಸರ್ಕಾರವು ರಾಜಕೀಯದಲ್ಲಿ ಮಹಿಳೆಯರಿಗೆ ಮೀಸಲಾತಿ ತಂದಿದೆಯೋ ಅದು ಅನುಷ್ಠಾನ ಮಟ್ಟದಲ್ಲಿ ಕ್ರಿಯಾತ್ಮಕವಾಗಿಲ್ಲ. ಅಭಿವೃದ್ಧಿಯ ಫಲಗಳು ಜನರಿಗೆ ದೊರೆಯುತ್ತಿಲ್ಲ. ಗ್ರಾಮ ಪಂಚಾಯತಿಗಳು ಅಭಿವೃದ್ಧಿ ಘಟಕಗಳಾಗಿ ಕೆಲಸ ಮಾಡುತ್ತಿಲ್ಲ. ಗ್ರಾಮ ಪಂಚಾಯತಿಗಳ ಮಹಿಳಾ ಸದಸ್ಯೆಯರು ಸಾಮಾಜಿಕ ಬದಲಾವಣೆ ಹಾಗೂ ಅಭಿವೃದ್ಧಿಯ ನಿಯೋಗಿಗಳಾಗಿ ಪಾತ್ರ ನಿರ್ವಹಿಸುತ್ತಿಲ್ಲ.

ಮಹಿಳೆಯರಿಗೆ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ನೀಡಿರುವ ಮೀಸಲಾತಿಯು ವಿಫಲವಾಗಿರಲು ಮುಖ್ಯ ಕಾರಣವೆಂದರೆ ಚುನಾಯಿತ ಮಹಿಳಾ ಸದಸ್ಯೆಯರ ಅನಕ್ಷರತೆ, ಬಡತನ ಹಾಗೂ ಸಮಾಜದಲ್ಲಿರುವ ಲಿಂಗತಾರತಮ್ಯ. ಈ ಮೀಸಲಾತಿ ಪ್ರಕ್ರಿಯೆಯು ಕ್ರಿಯಾಶೀಲವಾಗಿ ಸಮಾಜದಲ್ಲಿ ಬದಲಾವಣೆಯನ್ನು ಸೃಷ್ಟಿಸಲು ಮಹಿಳೆಯರ ಶಿಕ್ಷಣ, ಸಾಕ್ಷರತೆ, ಆರೋಗ್ಯ, ಉದ್ಯೋಗ ಮುಂತಾದವುಗಳ ಕಡೆ ಗಮನ ನೀಡಬೇಕಾಗಿದೆ. ಗ್ರಾಮ ಪಂಚಾಯತಿಗಳಿಗೆ ಆಯ್ಕೆಯಾದ ಮಹಿಳಾ ಸದಸ್ಯೆಯರಿಗೆ ಕ್ರಿಯಾಶೀಲ ತರಬೇತಿಯ ಅವಶ್ಯಕತೆ ಇದೆ. ಇದು ನಮ್ಮ ಅಧ್ಯಯನದ ಆಧಾರದ ಮೇಲೆ ರೂಪುಗೊಂಡ ಪರಿಹಾರೋಪಾಯವಾಗಿದೆ.

ಚುನಾಯಿತ ಮಹಿಳಾ ಸದಸ್ಯೆಯರು ಕ್ರಿಯಾಶೀಲರಾಗಿಲ್ಲ. ಅವರು ಗ್ರಾಮಸಭೆಗಳಲ್ಲಿ ಭಾಗವಹಿಸುತ್ತಿಲ್ಲ. ಕೆಲವು ಚುನಾಯಿತ ಮಹಿಳಾ ಸದಸ್ಯೆಯರಿಗೆ ಗ್ರಾಮಸಭೆಯೆಂದರೇನು ಎಂಬುದೇ ತಿಳಿದಿಲ್ಲ. ಬಹುಪಾಲು ಮಹಿಳಾ ಸದಸ್ಯೆಯರು ಸ್ವ ಇಚ್ಛೆಯಿಂದ ಚುನಾವಣೆ ಪ್ರವೇಶಿಸಿಲ್ಲ.

ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ನಮ್ಮಲ್ಲೇ ಇದೆ. ಸಾಕ್ಷರತೆಯನ್ನು ಹೆಚ್ಚಿಸುವ, ಮಹಿಳಾ ಸಾಕ್ಷರತೆಯನ್ನು ಹೆಚ್ಚಿಸುವ ಕಾರ್ಯಕ್ರಮಗಳಿಗೆ ಆದ್ಯತೆ ನೀಡಬೇಕಾಗಿದೆ. ಆಗ ಮಾತ್ರ ೭೩ ಮತ್ತು ೭೪ನೇ ಸಂವಿಧಾನದ ತಿದ್ದುಪಡಿಗಳು ಕ್ರಿಯಾಶೀಲ ರೂಪಕ್ಕೆ ಬರಲು ಸಾಧ್ಯ.

# ಗ್ರಂಥಸೂಚಿ:

೧. ಕಲ್ಮಠ್ , ಎಲ್.ಎಚ್. (೧೯೯೧)
ಗ್ರಾಮೀಣ ಜನತೆ ಮತ್ತು ರಾಜಕೀಯ ಚಿಂತನೆ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨. ಕಬ್ಬೂರು, ಎ.ಎಸ್. (೧೯೮೫)
ಭಾರತದಲ್ಲಿ ಪ್ರಜಾಪ್ರಭುತ್ವ,
ಪದ್ಮ, ಬೆಂಗಳೂರು.

೩. ಚಾರಿ, ಲೀಲಾವತಿ. (೧೯೯೨)
ಮಹಿಳೆಯರ ಹಕ್ಕುಗಳು,
ಜಾಗೃತ, ಧಾರವಾಡ.

೪. ನಾರಾಯಣ, ಜಯಪ್ರಕಾಶ. (೧೯೯೪)
ಜನತಾ ಸ್ವರಾಜ್ಯ,
ಕರುಣಾ ಪ್ರಕಾಶನ, ಹೊಸಪೇಟೆ.

೫. ಜೋಶಿ, ಎ.ಎಂ. (೧೯೮೫)
ಗ್ರಾಮಾಂತರ ಸಮುದಾಯಗಳಲ್ಲಿನಾಯಕತ್ವದ ನಿರ್ಮಾಣ,
ಆನಂದ ಪಬ್ಲಿಕೇಷನ್ಸ್, ಧಾರವಾಡ.

೬. ನಾಗಪ್ಪ, ಟಿ.ಆರ್. (೧೯೯೪)
ಕರ್ನಾಟಕದಲ್ಲಿಪಂಚಾಯತ್ ರಾಜ್ಯ,
ನವ ಕರ್ನಾಟಕ, ಬೆಂಗಳೂರು.

೭. ನಾಯಕ, ಹಾ.ಮಾ. (೧೯೨೯)
ಕನ್ನಡ ವಿಷಯ ವಿಶ್ವಕೋಶ,
ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೮. ರಾಮಚಂದ್ರಪ್ಪ, ಬರಗೂರು. (೧೯೭೭)
ಜನತಾ ಪ್ರಜಾಪ್ರಭುತ್ವ ,
ಶತಭಾಷೆ, ತುಮಕೂರು.

೯. ಪಾಟೀಲ, ವಸಂತ. (೧೯೭೭)
ಪಂಚಾಯತ್ ಆಡಳಿತದ ಸಾಧಕ ಬಾಧಕಗಳು,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೦.ಪಾಟೀಲ, ಎನ್.ಬಿ. (೧೯೮೪)
ಕರ್ನಾಟಕ ರಾಜ್ಯ ಗ್ರಾಮೀಣ ಪ್ರದೇಶದ ಆಡಳಿತ ಸಂಸ್ಥೆಗಳು,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೧.ಪುರಾಣಿಕ, ಸಿದ್ಧಯ್ಯ. (೧೯೮೨)
ಗ್ರಾಮ ಸ್ವರಾಜ್ಯ,
ಕವಿಶೈಲಿ, ಬೆಂಗಳೂರು.

೧೨. ಬಡ್ಡಿ , ಎಂ.ಎಂ. (೧೯೯೨)
ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩,
ಆಕ್ಕವಂಡಿ ಬುಕ್ ಡಿಪೋ ಧಾರವಾಡ.

೧೩. ಬೀಚನಹಳ್ಳಿ , ಕರೀಗೌಡ. (೧೯೯೫)
ಭವಿಷ್ಯದ ಕರ್ನಾಟಕ,
ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪. ಭೋರೀಸ್, ಫುತ್ರಿನ್. (೧೯೮೨)
ರಾಜಕೀಯ ಪಾರಿಭಾಷಿಕ ಪದಕೋಶ,
ನವಕರ್ನಾಟಕ ಪಬ್ಲಿಕೇಷನ್ಸ್ , ಬೆಂಗಳೂರು.

೧೫. ಭಟ್ಟ, ಎಂ.ಎಂ. (೧೯೯೪)
ಕರ್ನಾಟಕ ಗ್ರಾಮ ಪಂಚಾಯತಿ.
ಶಾಸನ ಪರಿಚಯ, ಗ್ರಾಮೋದಯ, ಚೌಕಳ್ಳಿ.

೧೬. ಮುದ್ದಣ್ಣ, ಮಾಲಿ. (೧೯೮೨)
ಸರ್ಕಾರದ ಮೂಲತತ್ವಗಳು,
ಪದ್ಮ, ಬೆಂಗಳೂರು.

೧೭. ರಾಜಶೇಖರ, ಎಚ್.ಎಂ. (೧೯೮೦)
ಭಾರತ ಸರ್ಕಾರ ಮತ್ತು ರಾಜಕೀಯ,
ಪ್ರಮೋದ, ಬೆಂಗಳೂರು.

೧೮. ಕಾಮತ್, ಸೂರ್ಯನಾಥ್, ಯು. (೧೯೮೫)
ಕರ್ನಾಟಕ ರಾಜ್ಯ ಗ್ಯಾಸಿಟಿಯರ್ ಭಾಗ ೨,
ಕರ್ನಾಟಕ ರಾಜ್ಯ ಸರ್ಕಾರ, ಲೋಟಸ್, ಬೆಂಗಳೂರು.

೧೯. ಹೊಸಮನಿ, ಎಚ್.ಎಸ್. (೧೯೯೩)
ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩,
ಆಕಳವಾಡಿ, ಧಾರವಾಡ.

01. Acharya, Parames. (1993)
'Panchayats and Left Politics in West Bengal'
Economic and Political Weekly
(EPW), Vol. 28, No.22, pp. 1080 -82

02. Anand, Inbunathan. (1994)
'Karnataka Panchayats Under Administrators'
Institute of Social Science, New Delhi

03. Bhattacharya, Dipankar. (1993)
'New Challenges for Bengal Left Panchayats'
EPW, Vol. 28, No.22, pp 1491-94

04. Fourth World Conference on Women 1995
Department of Women and Child Development, Ministry of Human Resources Development, Government of India

05. Gandhi, M.K. (1945)
Panchayat Raj
Navajivan, Ahamadabad

06. Ganesh, Kamala .(1993)
'Gender between Family and State'
EPW, Vol, 28, No.43, pp. 2332-86

07. Iqbal, Narain. and Mathur, P.C. (1994)
Politics in Changing India,
Rawat, New Delhi

08. Jain, L.C. (1994)
'Panchayats: Women Will Win' in Kurukshetra,
Vol. 42, No.9, June, pp. 35-37

09. Kiswar, Madhu. (1996)
'Women and Politics Beyond' .
EPW, Vol. 31, No.43, pp, 2867-74

10. Krishna Murthy, K.S. (1993)
'Panchayat Raj in Karnataka: New Step Backgrounds'
EPW, Vol. 28, No.28, pp. 847-49

11. Krishna Murthy, K.S. (1993)
'For Panchayat the Dawn is not yet'
EPW, Vol. 28, No.41 , pp. 2183-86

12. Kumar, Kirti. (1994)
'Strategies for Employment of Women in PRIs' in Kurukshetra'
Vol. 42, No.9, June, pp. 6-8

13. Manor, James. (1993)
'Panchayat Raj and Warming of Distance'
EPW, Vol. 38, No.2, pp. 1019-20

14. Mathew, George. (1994)
'Women in Pachayat Raj: Beginning
of a Silent Revolution', Kurukshetra,
Vol. 42, No.9, June, pp. 25-26

15. Mathew, George: et. al., (1996)
'Panchayats at work : What it means for the Oppressed',
EPW, Vol. 31, No.27, pp. 1765-73

16. Mukrajee, Neela. (1994)
'Rural Women and Panchayati Raj Institutions' in Kurukshetra,
Vol. 42, No.9 June, pp. 9.-11

17. Mukrajee, Amitwa.(ed) (1994),
Decentralisation: Panchayats in the Nineties,
Vikas , New Delhi

18. Nayak, P.R. (1995)
A Report on Karnataka Panchayat Raj Act 1993,
Govt. of Karnataka.

19. Palimithurai, G. (1994),
Partcipation in Development Process,
Rawat , New Delhi

20. Pal, Mani. (1994)
'Centralised and Decentralised: Hariyana's Panchayat Raj Act 1994',
EPW, Vol. 29, No.29, pp.1842-44

21. Pinto, Ambrose. (1994)
'Karnataka: Politics of Reservation', .
EPW, Vol. 29. No.35 , pp. 2270-72

22. Rajraman, et.al., (1996)
'Augmentation of Panchayat Resources',
EPW, Vol. 31, No.18, pp. 1071-83

23. Rodhe, John. (1994)
Role of Panchayat Raj in Shaping the Future of Children,
Institute of Social Science, New Delhi

24. Sharada, K. (1994)
'Women in Kerala and Some Development Issues',
EPW, Vol. 29, No.9, pp. 501 -10

25. Singh, Rastam. and Sharma, Hnil. (1993)
'Punjab Panchayat Elections, A Turnng Point',
EPW, Vol. 31, No.44, pp: 2348-53

26. Umapathy, M. (1985)
A History of Local Self -Government in Rural Karnataka,
Prasanga, Mysore University

27. Zaidi, S.Akbar. (1996)
'Urban and Local Government in Pakistan: Expecting Too much from Too Little',
EPW, Vol. 31, No.44, pp. 2948-53